ಶ್ರೀಜಗದ್ಗುರುಪಂಚಾಚಾರ್ಯಾಃ ಪ್ರಸೀದಂತು.

# ಸಿದ್ಧಾಂತಶಿಖಾಮಣಿಃ

## ಪ್ರಥಮಪರಿಚ್ಛೇದಃ

**ತ್ರೈಲೋಕ್ಯಸಂಪದಾಲೇಖ್ಯಸಮುಲ್ಲೇಖನಭಿತ್ತಯೇ ।**
**ಸಚ್ಚಿದಾನಂದರೂಪಾಯ ಶಿವಾಯ ಬ್ರಹ್ಮಣೇ ನಮಃ ॥೧॥**

---

## ಭಾವಪ್ರಕಾಶವ್ಯಾಖ್ಯಾನಂ

ನಮಃ ಸಾಂಬಾಯ ನಿತ್ಯಾಯ ಶಿವಾಯ ಪರಮಾತ್ಮನೇ ।
ಷಟ್ತ್ರಿಂಶತ್ತತ್ತ್ವಬೀಜಾಯ ಲಿಂಗರೂಪಾಯ ಶಂಭವೇ ॥೧॥
ಪಂಚಾಸ್ಯವದನೋದ್ಭೂತಾನ್ ಪಂಚತತ್ತ್ವಾಧಿನಾಯಕಾನ್ ।
ಪಂಚಬ್ರಹ್ಮಮಯಾನ್ನೌಮಿ ಪಂಚಾಚಾರ್ಯಾನ್ ಜಗದ್ಗುರೂನ್ ॥೨॥
ವರ್ಣಾರುಜನಮಂದಾರಂ ಸಚ್ಚಿದಾನಂದಮಂದಿರಂ ।
ಮುಕ್ತಿಮಾಕಂದಮುತ್ಕೀರಂ ವಂದೇ ಶ್ರೀರೇಣುಕೇಶ್ವರಂ ॥೩॥
ರೇಣುಕಾಗಸ್ತ್ಯಸಂವಾದಂ ಶ್ರೀಸಿದ್ಧಾಂತಶಿಖಾಮಣಿಂ ।
ನಿಗಮಾಗಮತತ್ತ್ವಾರ್ಥಭೂಷಿತಂ ಭಾವಗರ್ಭಿತಂ ॥೪॥
ನಾಗನೂರುಮಠಾಧೀಶಃ ಕಾಶೀನಾಥಸುಧೀಮಣಿಃ ।
ಕರ್ಣಾಟಭಾಷಯಾ ಸಮ್ಯಗ್ವಿವೃಣೋತಿ ಮುದಾನ್ವಿತಃ ॥೫॥

## ಒಂದನೆಯ ಪರಿಚ್ಛೇದವು.

ಶ್ರೀರೇಣುಕಾಗಸ್ತ್ಯಸಂವಾದರೂಪವಾದ ಸಿದ್ಧಾಂತಶಿಖಾಮಣಿಯನ್ನು ವಿರಚಿ . ಶ್ರೀಶಿವಯೋಗಿಶಿವಾಚಾರ್ಯರು, ಗ್ರಂಥಾದಿಯಲ್ಲಿ ಪರಶಿವನನ್ನು ಕುರಿತು ಏಳು ಶ್ಲೋಕಗಳಿಂದ ನಮಸ್ಕಾರಾತ್ಮಕಮಂಗಲವನ್ನಾಚರಿಸುತ್ತಾರೆ.

**ಶಿವಸ್ತುತಿ.**

ವ್ಯಾಖ್ಯಾನ—ತ್ರೈಲೋಕ್ಯಸಂಪದ್ರೂಪಚಿತ್ರಲೇಖನಕ್ಕೆ ಭಿತ್ತಿಸ್ವರೂಪನೂ, ಸಚ್ಚಿದಾನಂದಸ್ವರೂಪನೂ, ಪರಬ್ರಹ್ಮಸ್ವರೂಪನೂ ಆಗಿರುವ ಶಿವನಿಗೆ ನಮಸ್ಕಾರವು. ॥೧॥

ಬ್ರಹ್ಮೇತಿವ್ಯಪದೇಶಸ್ಯ ವಿಷಯಂ ಯಂ ಪ್ರಚಕ್ಷತೇ ।
ವೇದಾಂತಿನೋ ಜಗನ್ಮೂಲಂ ತಂ ನಮಾಮಿ ಪರಂ ಶಿವಂ ॥೨॥
ಯಸ್ಯೋರ್ಮಿಬುದ್ಬುದಾಭಾಸಃ ಷಟ್ತ್ರಿಂಶತ್ತತ್ತ್ವಸಂಚಯಃ ।
ನಿರ್ಮಲಂ ಶಿವನಾಮಾನಂ ತಂ ವಂದೇ ಚಿನ್ಮಹೋದಧಿಂ ॥೩॥

ವೇದಾಂತಿಗಳು 'ಪರಬ್ರಹ್ಮ' ಎಂಬ ಶಬ್ದಕ್ಕೆ ಯಾವನನ್ನು ವಿಷಯನನ್ನಾಗಿ ಹೇಳುತ್ತಾರೆಯೋ, ಚರಾಚರಜಗತ್ಕಾರಣನಾದ ಆ ಪರಶಿವನನ್ನು ನಮಸ್ಕರಿಸುತ್ತೇನೆ. ॥೨॥ ಶಿವಾದಿಭೂಮ್ಯಂತವಾದ ಮೂವತ್ತಾರು ತತ್ತ್ವಗಳ ಸಮೂಹವು ಯಾವ ಪರಶಿವಬ್ರಹ್ಮನಾಮಕಚಿತ್ಸಮುದ್ರದಲ್ಲಿ ತರಂಗಾದಿಗಳಂತೆ ಭಾಸಿಸುತ್ತದೆಯೋ, ಆ ಆಣವಾದಿಮಲತ್ರಯರಹಿತವಾದ ಶಿವನಾಮಕಮಹಾಜ್ಞಾನಸಮುದ್ರವನ್ನು ನಮಸ್ಕರಿಸುತ್ತೇನೆ. ॥ ವೀರಶೈವಸಿದ್ಧಾಂತದಲ್ಲಿ ೩೬ ತತ್ತ್ವಗಳು ಅಂಗೀಕೃತವಾಗಿರುವುವು. ಆದುದರಿಂದಲೇ ಗ್ರಂಥಕಾರರು ಆ ಛಾಯೆಯನ್ನು ಈ ಮಂಗಲಶ್ಲೋಕದಲ್ಲಿ ತೋರಿಸಿರುತ್ತಾರೆ. ಈ ೩೬ ತತ್ತ್ವಗಳ ಸ್ವರೂಪವು ಸರ್ವರಿಗೂ ಮುಖ್ಯವಾಗಿ ತಿಳಿಯಬೇಕಾದುದರಿಂದ, ಈ ವಿಷಯವನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸುವುದಾಗುವುದು.

ಸಚ್ಚಿದಾನಂದಸ್ವರೂಪವಾದ ಪರಶಿವಬ್ರಹ್ಮದಲ್ಲಿ ಅವಿನಾಭಾವಸಂಬಂಧದಿಂದಿರುವ ವಿಮರ್ಶಶಕ್ತಿಯ ಸ್ಫುರಣವೇ " ಶಿವ-ಶಕ್ತಿ-ಸದಾಶಿವ-ಈಶ್ವರ-ಶುದ್ಧವಿದ್ಯಾ-ಮಾಯಾ-ಕಲಾ-ವಿದ್ಯಾ-ರಾಗ-ಕಾಲ-ನಿಯತಿ-ಪುರುಷ-ಪ್ರಕೃತಿ-ಬುದ್ಧಿ-ಅಹಂಕಾರ-ಮನಃ-ಶ್ರೋತ್ರ-ತ್ವಕ್ - ನೇತ್ರ-ಜಿಹ್ವಾ-ಘ್ರಾಣ-ವಾಕ್- ಪಾಣಿ - ಪಾದ - ಪಾಯು-ಉಪಸ್ಥ-ಶಬ್ದ-ಸ್ಪರ್ಶ-ರೂಪ-ರಸ-ಗಂಧ-ಆಕಾಶ-ವಾಯು-ಅಗ್ನಿ-ಜಲ-ಪೃಥಿವೀ"ಗಳೆಂಬ ಮೂವತ್ತಾರು ತತ್ತ್ವಗಳ ರೂಪವಾಗಿ ಪರಿಣಮಿಸುವುದು.

ಶಕ್ತಿವಿಶಿಷ್ಟಪರಶಿವಬ್ರಹ್ಮವು " ಬಹು ಸ್ಯಾಂ ಪ್ರಜಾಯೇಯ "(೬-೨-೩) ಎಂಬ ಛಾಂದೋಗ್ಯಶ್ರುತಿವಾಕ್ಯಾಭಿಪ್ರಾಯಾನುಸಾರವಾಗಿ ಸೃಷ್ಟಿಗುನ್ಮುಖವಾಗಲು, ತನ್ನಿಷ್ಠವಾದ ವಿಮರ್ಶಶಕ್ತಿಯೇ ಇಚ್ಛಾಶಕ್ತಿರೂಪವಾಗಿ ಪರಿಣಮಿಸುವುದು.

ಅನಾದಿಸಿದ್ಧನಾಚ್ಛಾಂತಾಚ್ಛಿವಾತ್ ಪರಮಕಾರಣಾತ್ । ಇಚ್ಛಾಶಕ್ತಿರ್ವಿನಿಷ್ಕ್ರಾಂತಾ
ತತೋ ಜ್ಞಾನಂ ತತಃ ಕ್ರಿಯಾ ॥ ತತ್ರೋತ್ಪನ್ನಾನಿ ಭೂತಾನಿ ಭುವನಾನಿ ಚತುರ್ದಶ ॥

ಎಂಬ ಶಿವಾಗಮಪ್ರಮಾಣಾನುಸಾರವಾಗಿ ಉತ್ಪತ್ತಿನಾಶರಹಿತವೂ, ಪರಮಕಾರಣವೂ, ಶಾಂತವೂ ಆದ ಪರಶಿವಬ್ರಹ್ಮದಿಂದ ಮೊದಲು ಇಚ್ಛಾಶಕ್ತಿಯೂ, ಅದರಿಂದ ಜ್ಞಾನಶಕ್ತಿಯೂ, ಕ್ರಿಯಾಶಕ್ತಿಯೂ ಆವಿರ್ಭವಿಸುವುವು. ಆ ಇಚ್ಛಾಶಕ್ತಿಗೆ ಜ್ಞಾನಶಕ್ತಿಯು ಅಂತರಂಗವಾಗಿಯೂ, ಕ್ರಿಯಾಶಕ್ತಿಯು ಬಹಿರಂಗವಾಗಿಯೂ

ಇರುವುವು. ಪರಶಿವಬ್ರಹ್ಮವು ಜ್ಞಾನಶಕ್ತಿಯಲ್ಲಿ ಬೆರೆತು 'ನಾನು ಸರ್ವಜ್ಞನು' ಎಂಬ ಅಭಿಮಾನವನ್ನು ಪಡೆಯಲು, "ಶಿವತತ್ತ್ವ" ವೆನಿಸಿಕೊಳ್ಳುವುದು. ಜೇಡರಹುಳವು ಜಾಲಕ್ಕೆ ನಿಮಿತ್ತಕಾರಣವಾಗುವಂತೆ, ಈ ಶಿವತತ್ತ್ವಾತ್ಮಕವಾದ ಪರಶಿವಬ್ರಹ್ಮವೇ ಜ್ಞಾನವಿಶಿಷ್ಟತ್ವಾಕಾರದಿಂದ ಭಾವಿಪ್ರಪಂಚಕ್ಕೆ ನಿಮಿತ್ತಕಾರಣವಾಗುವುದು.

ಪರಶಿವಬ್ರಹ್ಮವು ಕ್ರಿಯಾಶಕ್ತಿಯಲ್ಲಿ ಬೆರೆತು 'ನಾನು ಸರ್ವಕರ್ತೃವು' ಎಂಬ ಅಭಿಮಾನವನ್ನು ಪಡೆಯಲು, "ಶಕ್ತಿತತ್ತ್ವ" ವೆನಿಸಿಕೊಳ್ಳುವುದು. ಜೇಡರಹುಳವು ಜಾಲೋತ್ಪತ್ತಿಯೋಗ್ಯಶರೀರವಿಶೇಷವಿಶಿಷ್ಟತ್ವಾಕಾರದಿಂದ ಜಾಲಕ್ಕೆ ಉಪಾದಾನ ಕಾರಣವಾಗುವಂತೆ, ಈ ಶಕ್ತಿತತ್ತ್ವಾತ್ಮಕವಾದ ಪರಶಿವಬ್ರಹ್ಮವೇ ಕ್ರಿಯಾ ವಿಶಿಷ್ಟತ್ವಾಕಾರದಿಂದ ಭಾವಿಪ್ರಪಂಚಕ್ಕೆ ಉಪಾದಾನಕಾರಣವೂ ಆಗುವುದು.

ಪರಶಿವಬ್ರಹ್ಮವೊಂದೇ ಪ್ರಪಂಚಕ್ಕೆ ಅಭಿನ್ನನಿಮಿತ್ತೋಪಾದಾನಕಾರಣವಾಗುವುದೆಂಬುದನ್ನು ಮುಂಡಕಶ್ರುತಿಯು—"ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ"(೧-೧-೭) ಎಂಬೀ ವಾಕ್ಯದಿಂದ ಪ್ರತಿಪಾದಿಸುತ್ತಿರುವುದು.

ಈ ಶಕ್ತಿತತ್ತ್ವವು ಇಚ್ಛಾಶಕ್ತಿಗೆ ಅಂತರಂಗವಾದ ಜ್ಞಾನಶಕ್ತಿಯಲ್ಲಿ ಪ್ರವೇಶಿಸಿ, ಜಲಾಧಿವಾಸದಿಂದ ಅಂಕುರೋನ್ಮುಖವಾದ ಕಡಲೆಯಂತೆ ಉಬ್ಬಿ, ಅಂಕುರಾಯಣವಾದ ಭಾವಿಪ್ರಪಂಚವನ್ನು ಕುರಿತು—'ಅಹಮಿದಂ'—'ನಾನು ಈ ಪ್ರಪಂಚವು' ಎಂದು ಅಭಿಮಾನವನ್ನು ಪಡೆಯಲು, "ಸದಾಶಿವತತ್ತ್ವ" ವೆನಿಸಿಕೊಳ್ಳುವುದು.

ಈ ಶಕ್ತಿತತ್ತ್ವವು ಇಚ್ಛಾಶಕ್ತಿಗೆ ಬಹಿರಂಗವಾದ ಕ್ರಿಯಾಶಕ್ತಿಯಲ್ಲಿ ಪ್ರವೇಶಿಸಿ, ಸುಕ್ಷೇತ್ರದಲ್ಲಿ ಬಿತ್ತಿದ ಸುಬೀಜದಂತೆ ಅಂಕುರಿಸಿ, ಅಂಕುರಿತವಾದ ಪ್ರಪಂಚವನ್ನು ಕುರಿತು— 'ಅಹಮಿದಂ'—'ನಾನು ಈ ಪ್ರಪಂಚವು' ಎಂದು ಅಭಿಮಾನವನ್ನು ಪಡೆಯಲು, "ಈಶ್ವರತತ್ತ್ವ" ವೆನಿಸಿಕೊಳ್ಳುವುದು.

ಈ ಶಕ್ತಿತತ್ತ್ವವು, ಸಾಗರತರಂಗನ್ಯಾಯದಂತೆ (ಸಮುದ್ರಕ್ಕೂ ಸಮುದ್ರದಲ್ಲಿರುವ ತೆರೆಗಳಿಗೂ ಅಭೇದವಿರುವಂತೆ) 'ಅಹಮಿದಂ'—'ನಾನು' ಎಂಬ ಅಹಂಕಾರಕ್ಕೂ 'ಇದು' ಎಂಬ ಪ್ರಪಂಚಕ್ಕೂ ಅಭೇದಜ್ಞಾನವನ್ನು ಪಡೆಯಲು, "ಶುದ್ಧವಿದ್ಯಾತತ್ತ್ವ" ವೆನಿಸಿಕೊಳ್ಳುವುದು.

ಶುದ್ಧವಿದ್ಯಾತತ್ತ್ವರೂಪವಾಗಿ ಪರಿಣಮಿಸಿರುವೀ ಶಕ್ತಿತತ್ತ್ವವು, ಮಯೂರಾಂಡರಸನ್ಯಾಯದಂತೆ (ನವಿಲಿನ ತತ್ತಿಯ ರಸದಲ್ಲಿ ಪಾದ-ಪಕ್ಷ-ವರ್ಣವೈಚಿತ್ರ್ಯಾದಿಗಳು ವಿಭಾಗರೂಪವಾಗಿ ಸೂಕ್ಷ್ಮರೂಪದಿಂದಿರುವಂತೆ) ತನ್ನಲ್ಲಡಕವಾಗಿರುವ ಭಾವಿಪ್ರಪಂಚನಿರ್ಮಾಣಕಾರಣೀಭೂತಸೂಕ್ಷ್ಮಪದಾರ್ಥಗಳಲ್ಲಿ, ಅನ್ಯೋನ್ಯಾಭಾವರೂಪ ಭೇದಬುದ್ಧಿಪ್ರಾಧಾನ್ಯದಿಂದ "ಮಾಯಾತತ್ತ್ವ" ವೆನಿಸಿಕೊಳ್ಳುವುದು.

ಕಲಾ-ವಿದ್ಯಾ-ರಾಗ-ಕಾಲ-ನಿಯತಿಗಳೆಂಬ ಪಂಚತತ್ತ್ವಗಳು ಪುರುಷನಿಗೆ ಕಂಚುಕರೂಪವಾಗಿರುವುದರಿಂದ, ಮೊದಲು ಕಂಚುಕಿಯಾದ ಪುರುಷತತ್ತ್ವವನ್ನು ನಿರೂಪಿಸಿ, ಬಳಿಕ ಕಲಾದಿಪಂಚತತ್ತ್ವಗಳನ್ನು ನಿರೂಪಿಸುವುದಾಗುವುದು.

ಕಾಷ್ಠಯೋಗದಿಂದ ಅಗ್ನಿಕಣಗಳು ಆವಿರ್ಭವಿಸುವಂತೆ, ಪರಶಿವನ ಇಚ್ಛಾ ಶಕ್ತಿಯ ಯೋಗದಿಂದ ಆವಿರ್ಭವಿಸುವ ಶಿವಾಂಶವೇ ಮಾಯಾಶಕ್ತಿಯಲ್ಲಿ ಪ್ರವೇಶಿಸಿ, "ಪುರುಷತತ್ತ್ವ"ವೆನಿಸಿಕೊಳ್ಳುವುದು. ಈ ಪುರುಷತತ್ತ್ವಕ್ಕೆ ಮಾಯಾಮಲಸಂಬಂಧ ವುಂಟಾಗುವುದರಿಂದ, ಆತ್ಮನಲ್ಲಿ ಅನಾತ್ಮತ್ವಜ್ಞಾನವೂ, ಅನಾತ್ಮವಸ್ತುಗಳಲ್ಲಿ ಆತ್ಮತ್ವ ಜ್ಞಾನವೂ, 'ನಾನು ಸುಖಿಯು — ನಾನು ದುಃಖಿಯು' ಎಂಬ ಬುದ್ಧಿಯೂ ಉತ್ಪನ್ನ ವಾಗುವುವು. ಪುರುಷನು ಈ ರೀತಿಯಾಗಿ ಆಣವಾದಿಮಲಗಳಿಂದ ಯುಕ್ತನಾಗುವುದ ರಿಂದ ಸಂಸಾರಿಯೆನಿಸುವನು.

ಪುರುಷನು ಮಾಯಾಮಲಾವೃತನಾಗಿ ತನ್ನ ಸರ್ವಕರ್ತೃತ್ವ-ಸರ್ವಜ್ಞತ್ವ-ಪೂರ್ಣತ್ವ-ನಿತ್ಯತ್ವ-ವ್ಯಾಪಕತ್ವರೂಪಶಕ್ತಿಗಳನ್ನು ಕಳೆದುಕೊಂಡು, ಕಿಂಚಿತ್ಕರ್ತೃತ್ವಾದಿ ಶಕ್ತಿಗಳಿಂದ ಯುಕ್ತನಾಗುವನು. ಪುರುಷನ ಈ ಕಿಂಚಿತ್ಕರ್ತೃತ್ವರೂಪಶಕ್ತಿಯೇ, "ಕಲಾತತ್ತ್ವ"ವೆನಿಸಿಕೊಳ್ಳುವುದು. ಕಿಂಚಿಜ್ಜ್ಞತ್ವರೂಪಶಕ್ತಿಯೇ "ವಿದ್ಯಾತತ್ತ್ವ" ವೆನಿಸಿಕೊಳ್ಳುವುದು. ಅಪೂರ್ಣತ್ವರೂಪಶಕ್ತಿಯೇ, ಸ್ರಕ್ಚಂದನವನಿತಾದಿವಿಷಯಕ ಪ್ರೀತಿರೂಪವಾದ "ರಾಗತತ್ತ್ವ" ವೆನಿಸಿಕೊಳ್ಳುವುದು. ಅನಿತ್ಯತ್ವರೂಪಶಕ್ತಿಯೇ, ಭೂತಭವಿಷ್ಯದ್ವರ್ತಮಾನಕಾಲಗಳ ವ್ಯವಹಾರಕ್ಕೆ ಅಸಾಧಾರಣಕಾರಣವಾದ "ಕಾಲ ತತ್ತ್ವ" ವೆನಿಸಿಕೊಳ್ಳುವುದು. ಅವ್ಯಾಪಕತ್ವರೂಪಶಕ್ತಿಯೇ, ಈ ಕಾರಣದಿಂದ ಈ ಕಾರ್ಯವೇ ಹುಟ್ಟುವುದು; ಮತ್ತೊಂದು ಹುಟ್ಟುವುದಿಲ್ಲವೆಂಬ ನಿಯಮಕ್ಕೆ ಅಸಾಧಾರಣಕಾರಣವಾದ "ನಿಯತಿತತ್ತ್ವ" ವೆನಿಸಿಕೊಳ್ಳುವುದು.

ಕಾರ್ಯೌನ್ಮುಖ್ಯಗರ್ಭಿತವಾದ ಇಚ್ಛಾಶಕ್ತಿಯು, ಸ್ವಗತವಾದ ಜ್ಞಾನಶಕ್ತಿ ಕ್ರಿಯಾಶಕ್ತಿಗಳಲ್ಲಿರುವ 'ಜ್ಞಾನಂ ಕ್ರಿಯಾ ನ ಭವತಿ ಕ್ರಿಯಾ ಜ್ಞಾನಂ ನ ಭವತಿ' ಎಂಬ ಅನ್ಯೋನ್ಯಾಭಾವರೂಪಭೇದಬುದ್ಧಿಪ್ರಧಾನವಾದ ಮಾಯಾತತ್ತ್ವದಲ್ಲಿ ಪ್ರತಿಸ್ಫುರಿಸಲು, "ಪ್ರಕೃತಿತತ್ತ್ವ" ವೆನಿಸಿಕೊಳ್ಳುವುದು. ಈ ಪ್ರಕೃತಿತತ್ತ್ವವು ಸುಖ ದುಃಖಮೋಹಗಳಿಗೆ ಕಾರಣಗಳಾದ ಸತ್ವರಜಸ್ತಮೋಗುಣಗಳ ಸಾಮ್ಯಾವಸ್ಥಾರೂಪ ವಾಗಿದ್ದು, ಮಹತ್ತತ್ತ್ವವೇ ಮೊದಲ್ಗೊಂಡು ಪೃಥಿವ್ಯಂತವಾಗಿರುವ ೨೩ ತತ್ತ್ವ ಗಳಿಗೆ ಮೂಲಕಾರಣವಾಗಿರುವುದು.

ಪ್ರಕೃತಿತತ್ತ್ವರೂಪವಾದೀ ಶಕ್ತಿತತ್ತ್ವವೇ, 'ಇದಮಿತ್ಥಂ' ಇದು ಹೀಗೆಯೇ ಸರಿ! ಎಂಬ ನಿಶ್ಚಯಕ್ಕೆ ಕಾರಣವಾದುದಾಗಿ "ಬುದ್ಧಿತತ್ತ್ವ" ವೆನಿಸಿಕೊಳ್ಳುವುದು.

ಇದಕ್ಕೆ ಮಹತ್ತತ್ತ್ವವೆಂಬ ನಾಮಾಂತರವೂ ಉಂಟು. ಬುದ್ಧಿತತ್ತ್ವರೂಪವಾದೀ ಶಕ್ತಿತತ್ತ್ವವೇ 'ನಾನು—ನನ್ನದು' ಎಂಬ ಅಹಂಕಾರ-ಮಮಕಾರಗಳಿಗೆ ಕಾರಣವಾದುದಾಗಿ "ಅಹಂಕಾರತತ್ತ್ವ"ವೆನಿಸಿಕೊಳ್ಳುವುದು. ಅಹಂಕಾರತತ್ತ್ವರೂಪವಾದೀ ಶಕ್ತಿತತ್ತ್ವವೇ, 'ಸ್ಥಾಣುರ್ವಾ ಪುರುಷೋ ವಾ' ಎಂಬ ಸಂಕಲ್ಪವಿಕಲ್ಪಗಳಿಗೆ ಕಾರಣವಾದುದಾಗಿ "ಮನಸ್ತತ್ತ್ವ" ವೆನಿಸಿಕೊಳ್ಳುವುದು. ಬುದ್ಧ್ಯಹಂಕಾರ ಮನಸ್ತತ್ತ್ವಗಳು ಶರೀರದೊಳಗಿರುವುದರಿಂದ ಈ ಮೂರೂ "ಅಂತಃಕರಣ" ವೆನಿಸುವುವು. ಈ ಅಂತಃಕರಣವು ಇಚ್ಛಾಶಕ್ತಿಪ್ರಧಾನವಾಗಿರುವುದು.

ಅಂತಃಕರಣರೂಪವಾಗಿ ಪರಿಣಮಿಸಿದ ಈ ಶಕ್ತಿತತ್ತ್ವವೇ, ಬಾಹ್ಯಶರೀರವನ್ನವಲಂಬಿಸಿ ಶಬ್ದಜ್ಞಾನಕ್ಕೆ ಸಾಧನವಾಗಿ "ಶ್ರೋತ್ರತತ್ತ್ವ" ವೆಂದೂ, ಸ್ಪರ್ಶಜ್ಞಾನಕ್ಕೆ ಸಾಧನವಾಗಿ "ತ್ವಕ್‌ತತ್ತ್ವ" ವೆಂದೂ, ರೂಪಜ್ಞಾನಕ್ಕೆ ಸಾಧನವಾಗಿ "ನೇತ್ರತತ್ತ್ವ" ವೆಂದೂ, ರಸಜ್ಞಾನಕ್ಕೆ ಸಾಧನವಾಗಿ "ಜಿಹ್ವಾತತ್ತ್ವ" ವೆಂದೂ, ಗಂಧಜ್ಞಾನಕ್ಕೆ ಸಾಧನವಾಗಿ "ಘ್ರಾಣತತ್ತ್ವ" ವೆಂದೂ ಹೇಳಿಸಿಕೊಳ್ಳುವುದು. ಈ ಐದು ಇಂದ್ರಿಯಗಳು ಜ್ಞಾನಶಕ್ತಿಪ್ರಧಾನವಾದುದರಿಂದ ಜ್ಞಾನೇಂದ್ರಿಯಗಳೆಂದು ಹೇಳಿಸಿಕೊಳ್ಳುವುವು.

ಜ್ಞಾನೇಂದ್ರಿಯರೂಪವಾಗಿ ಪರಿಣಮಿಸಿದ ಈ ಶಕ್ತಿತತ್ತ್ವವೇ, ಉಚ್ಚಾರಣಕ್ರಿಯೆಗೆ ಸಾಧನವಾಗಿ "ವಾಕ್ತತ್ತ್ವ" ವೆಂದೂ, ದಾನಾದಾನಾದಿಕ್ರಿಯೆಗಳಿಗೆ ಸಾಧನವಾಗಿ "ಪಾಣಿತತ್ತ್ವ" ವೆಂದೂ, ಗಮನಾಗಮನಾದಿಕ್ರಿಯೆಗಳಿಗೆ ಸಾಧನವಾಗಿ "ಪಾದತತ್ತ್ವ" ವೆಂದೂ, ಮಲಪರಿತ್ಯಾಗಕ್ಕೆ ಸಾಧನವಾಗಿ "ಪಾಯುತತ್ತ್ವ" ವೆಂದೂ, ರೇತೋಮೂತ್ರಪರಿತ್ಯಾಗಕ್ಕೆ ಸಾಧನವಾಗಿ "ಉಪಸ್ಥತತ್ತ್ವ" ವೆಂದೂ ಹೇಳಿಸಿಕೊಳ್ಳುವುದು. ಈ ಐದು ಇಂದ್ರಿಯಗಳು ಕ್ರಿಯಾಶಕ್ತಿಪ್ರಧಾನವಾದುದರಿಂದ ಕರ್ಮೇಂದ್ರಿಯಗಳೆಂದು ಹೇಳಿಸಿಕೊಳ್ಳುವುವು. ಈ ಮೇಲೆ ಹೇಳಿದ ಬುದ್ಧಿತತ್ತ್ವಾದಿ ತ್ರಯೋದಶತತ್ತ್ವಗಳು, ಇಚ್ಛಾಶಕ್ತಿ-ಜ್ಞಾನಶಕ್ತಿ-ಕ್ರಿಯಾಶಕ್ತಿಪ್ರಧಾನವಾಗಿರುವುವು.

ಈ ಶಕ್ತಿತತ್ತ್ವವೇ, ಕೇವಲಶ್ರೋತ್ರೇಂದ್ರಿಯಗ್ರಾಹ್ಯವಾದ "ಶಬ್ದತತ್ತ್ವ" ರೂಪವಾಗಿಯೂ, ಕೇವಲತ್ವಗಿಂದ್ರಿಯಗ್ರಾಹ್ಯವಾದ "ಸ್ಪರ್ಶತತ್ತ್ವ" ರೂಪವಾಗಿಯೂ, ಕೇವಲನೇತ್ರೇಂದ್ರಿಯಗ್ರಾಹ್ಯವಾದ "ರೂಪತತ್ತ್ವ" ರೂಪವಾಗಿಯೂ, ಕೇವಲಜಿಹ್ವೇಂದ್ರಿಯಗ್ರಾಹ್ಯವಾದ "ರಸತತ್ತ್ವ" ರೂಪವಾಗಿಯೂ, ಕೇವಲಘ್ರಾಣೇಂದ್ರಿಯಗ್ರಾಹ್ಯವಾದ "ಗಂಧತತ್ತ್ವ" ರೂಪವಾಗಿಯೂ ಪರಿಣಮಿಸುವುದು. ಶಬ್ದದಲ್ಲಿ ಧ್ವನ್ಯಾತ್ಮಕ-ವರ್ಣಾತ್ಮಕಶಬ್ದವೆಂದೂ, ಸ್ಪರ್ಶದಲ್ಲಿ ಶೀತೋಷ್ಣಸ್ಪರ್ಶವೆಂದೂ, ರೂಪದಲ್ಲಿ ನೀಲಪೀತಾದಿರೂಪವೆಂದೂ, ರಸದಲ್ಲಿ ಮಧುರಾಮ್ಲಾದಿರಸ

ಯದ್ಭಾಸಾ ಭಾಸತೇ ವಿಶ್ವಂ ಯತ್ಸುಖೇನಾನುಮೋದತೇ ।
ನಮಸ್ತಸ್ಮೈ ಗುಣಾತೀತವಿಭವಾಯ ಪರಾತ್ಮನೇ ॥೪॥

ಸದಾಶಿವಮುಖಾಶೇಷತತ್ತ್ವೋನ್ಮೇಷವಿಧಾಯಿನೇ ।
ನಿಷ್ಕಲಂಕಸ್ವಭಾವಾಯ ನಮಃ ಶಾಂತಾಯ ಶಂಭವೇ ॥೫॥

ಸ್ವೇಚ್ಛಾವಿಗ್ರಹಯುಕ್ತಾಯ ಸ್ವೇಚ್ಛಾವರ್ತನವರ್ತಿನೇ ।
ಸ್ವೇಚ್ಛಾಕೃತತ್ರಿಲೋಕಾಯ ನಮಃ ಸಾಂಬಾಯ ಶಂಭವೇ ॥೬॥

---

ವೆಂದೂ, ಗಂಧದಲ್ಲಿ ಸುಗಂಧ-ದುರ್ಗಂಧವೆಂದೂ ವಿಭಾಗವು ವ್ಯಕ್ತವಾಗದೆ ಸಾಮಾನ್ಯ ರೂಪವಾಗಿರುವುದರಿಂದ, ಶಬ್ದಾದಿಗಳು "ತನ್ಮಾತ್ರ" ಗಳೆಂದು ಹೇಳಿಸಿಕೊಳ್ಳುವುವು.

ಪೂರ್ವೋಕ್ತವಾದೀ ಶಕ್ತಿತತ್ತ್ವವೇ, ಶಬ್ದೈಕಗುಣವುಳ್ಳ "ಆಕಾಶತತ್ತ್ವ" ರೂಪವಾಗಿಯೂ, ಸ್ಪರ್ಶವೆಂಬ ಪ್ರಧಾನಗುಣವುಳ್ಳ "ವಾಯುತತ್ತ್ವ" ರೂಪವಾಗಿಯೂ, ರೂಪವೆಂಬ ಪ್ರಧಾನಗುಣವುಳ್ಳ "ತೇಜಸ್ತತ್ತ್ವ" ರೂಪವಾಗಿಯೂ, ರಸವೆಂಬ ಪ್ರಧಾನಗುಣವುಳ್ಳ "ಜಲತತ್ತ್ವ" ರೂಪವಾಗಿಯೂ, ಗಂಧವೆಂಬ ಪ್ರಧಾನಗುಣವುಳ್ಳ "ಪೃಥಿವೀತತ್ತ್ವ" ರೂಪವಾಗಿಯೂ ಪರಿಣಮಿಸುವುದು. ಈ ಪಂಚಭೂತಗಳೊಳಗೆ ಉತ್ತರೋತ್ತರಭೂತಗಳಲ್ಲಿ ಪೂರ್ವಪೂರ್ವಭೂತಗಳ ಗುಣಗಳು ಅನುವರ್ತಿಸುವುವು. ನಿಗಮಾಗಮಪ್ರಸಿದ್ಧವಾದೀಮೂವತ್ತಾರುತತ್ತ್ವಗಳು ಸಚ್ಚಿದಾನಂದರೂಪವಾದ ಶಕ್ತಿವಿಶಿಷ್ಟಪರಶಿವಬ್ರಹ್ಮದ ಪರಿಣಾಮರೂಪವಾಗಿರುವುದರಿಂದ, ವೀರಶೈವಮತವು ಪರಿಣಾಮವಾದವನ್ನೂ, ಜಗತ್ಸತ್ಯತ್ವವಾದವನ್ನೂ ಬೋಧಿಸುತ್ತಿರುವುದು. ॥೩॥

"ತಸ್ಯ ಭಾಸಾ ಸರ್ವಮಿದಂ ವಿಭಾತಿ" (೫-೧೫) ಎಂಬ ಕಠವಲ್ಲೀಶ್ರುತಿಪ್ರಮಾಣಾನುಸಾರವಾಗಿ ಸಮಸ್ತಪ್ರಪಂಚವು ಯಾವ ಪರಶಿವಬ್ರಹ್ಮದ ಪ್ರಕಾಶದಿಂದ ಪ್ರಕಾಶಿಸುತ್ತದೆಯೋ, ಯಾವ ಪರಶಿವಬ್ರಹ್ಮದ ಆನಂದದಿಂದ ಆನಂದಿಸುತ್ತದೆಯೋ, ಆ ಹೇಯಗುಣರಹಿತವೈಭವನಾದ ಪರಮಾತ್ಮನಿಗೆ ನಮಸ್ಕಾರವು. ॥೪॥ ಶಿವಾದಿಭೂಮ್ಯಂತವಾದ ಮೂವತ್ತಾರು ತತ್ತ್ವಗಳನ್ನು ತನ್ನಲ್ಲಿ ಅಡಕವಾಗಿರುವ ವಿಮರ್ಶಶಕ್ತಿಯಿಂದ ಮಯೂರಾಂಡರಸನ್ಯಾಯದಂತೆ ವಿಕಾಸಗೊಳಿಸುವವನೂ, ನಿಷ್ಕಲಂಕಸ್ವಭಾವವುಳ್ಳವನೂ, ಶಾಂತನೂ ಆದ ಶಿವನಿಗೆ ನಮಸ್ಕಾರವು. ॥೫॥ ಭಕ್ತಾನುಗ್ರಹಕ್ಕಾಗಿ ಸ್ವೇಚ್ಛೆಯಿಂದ ನಾನಾವಿಧದಿವ್ಯಮಂಗಲವಿಗ್ರಹರೂಪವನ್ನು ಧರಿಸುವವನೂ, ಸ್ವೇಚ್ಛಾವರ್ತನವುಳ್ಳವನೂ, ತನ್ನಲ್ಲಿ ಅಡಕವಾಗಿರುವ ಇಚ್ಛಾಶಕ್ತಿಯಿಂದ ತ್ರಿಲೋಕಗಳನ್ನು ನಿರ್ಮಿಸುವವನೂ, ಪಾರ್ವತೀವಲ್ಲಭನೂ ಆದ ಶಂಕರನಿಗೆ ನಮಸ್ಕಾರವು. ॥೬॥

**ಯತ್ರ ವಿಶ್ರಾನ್ಯ್ಮತೀಶತ್ವಂ ಸ್ವಾಭಾವಿಕಮನುತ್ತಮಂ ।**
**ನಮಸ್ತಸ್ಮೈ ಮಹೇಶಾಯ ಮಹಾದೇವಾಯ ಶೂಲಿನೇ ॥೭॥**

**ಯಾಮಾಹುಃ ಸರ್ವಲೋಕಾನಾಂ ಪ್ರಕೃತಿಂ ಶಾಸ್ತ್ರಪಾರಗಾಃ ।**
**ತಾಂ ಧರ್ಮಚಾರಿಣೀಂ ಶಂಭೋಃ ಪ್ರಣಮಾಮಿ ಪರಾಂ ಶಿವಾಂ ॥೮॥**

---

ಯಾವ ಪರಶಿವಬ್ರಹ್ಮದಲ್ಲಿ ಸರ್ವಶ್ರೇಷ್ಠವೂ ಸ್ವಭಾವಸಿದ್ಧವೂ ಆದ ಈಶತ್ವವು (ಒಡೆತನವು) ವಿಶ್ರಾಂತಿಯನ್ನು ಹೊಂದುತ್ತದೆಯೋ, ಆ ಇಚ್ಛಾಜ್ಞಾನಕ್ರಿಯಾಶಕ್ತಿ ರೂಪತ್ರಿಶೂಲಧಾರಿಯಾದ ಮಹಾದೇವನಿಗೆ ನಮಸ್ಕಾರವು. ॥೭॥

ಇನ್ನು ಗ್ರಂಥಕಾರರು ಪರಶಿವನಲ್ಲಿ ಸದಾ ಅವಿನಾಭಾವಸಂಬಂಧದಿಂದಿರುವ ಶಕ್ತಿಯನ್ನು ಐದು ಶ್ಲೋಕಗಳಿಂದ ಸ್ತುತಿಸುತ್ತಾರೆ.

## ಶಕ್ತಿಸ್ತುತಿ.

ಸಕಲಶಾಸ್ತ್ರಕೋವಿದರು ಸಮಸ್ತಲೋಕಗಳ ಉತ್ಪತ್ತಿಗೆ ಯಾವಳನ್ನು ಮೂಲ ಕಾರಣೀಭೂತಳನ್ನಾಗಿ ಹೇಳುತ್ತಾರೆಯೋ, ಶಂಕರನ ಧರ್ಮಸ್ವರೂಪಳಾದ ಆ ಸರ್ವಮಂಗಲಾದೇವಿಯನ್ನು ನಮಸ್ಕರಿಸುತ್ತೇನೆ. ॥ ಗ್ರಂಥಕಾರರು ಈ ಮಂಗಲ ಶ್ಲೋಕದಲ್ಲಿ ಶಿವನಿಗೂ ಶಕ್ತಿಗೂ ಅವಿನಾಭಾವಸಂಬಂಧವನ್ನು ತೋರಿಸಿರುತ್ತಾರೆ. ಇದೇ ವೀರಶೈವಸಿದ್ಧಾಂತದ ಮೂಲರಹಸ್ಯವಾಗಿದ್ದು, ಶಕ್ತಿವಿಶಿಷ್ಟಾದ್ವೈತವೆನಿಸುವುದು. ಈ ಶಕ್ತಿವಿಶಿಷ್ಟಾದ್ವೈತಸಿದ್ಧಾಂತದ ಸ್ವರೂಪವನ್ನು ಮುಮುಕ್ಷುಗಳೆಲ್ಲರೂ ಅವಶ್ಯವಾಗಿ ತಿಳಿಯಬೇಕಾದುದರಿಂದ, ಅದನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸುವುದಾಗುವುದು.

ಶಕ್ತಿವಿಶಿಷ್ಟಾದ್ವೈತವೆಂದರೆ—ಶಕ್ತಿವಿಶಿಷ್ಟಜೀವನಿಗೂ ಶಕ್ತಿವಿಶಿಷ್ಟಶಿವನಿಗೂ ಸಾಮರಸ್ಯವೆಂದರ್ಥವು. " ಶಕ್ತಿಶ್ಚ ಶಕ್ತಿಶ್ಚ-ಶಕ್ತೀ-ತಾಭ್ಯಾಂ ವಿಶಿಷ್ಟೌ ಜೀವೇಶಾ, ತಯೋಃ ಅದ್ವೈತಂ ಶಕ್ತಿವಿಶಿಷ್ಟಾದ್ವೈತಂ " ಎಂದು ಪೂರ್ವಾಚಾರ್ಯರು ಶಕ್ತಿವಿಶಿಷ್ಟಾದ್ವೈತಪದದ ವ್ಯುತ್ಪತ್ತಿಯನ್ನು ತೋರಿಸಿರುವರು. ಶಕ್ತಿಯು ಸ್ಥೂಲಚಿದಾತ್ಮಕಶಕ್ತಿ-ಸೂಕ್ಷ್ಮಚಿದ ಚಿದಾತ್ಮಕಶಕ್ತಿ ಎಂದು ಎರಡು ಪ್ರಕಾರವಾಗಿರುವುದು. ಜೀವನು ಸ್ಥೂಲಚಿದಚಿದಾತ್ಮಕಶಕ್ತಿಯುಕ್ತನಾಗಿರುವನು ; ಶಿವನು ಸೂಕ್ಷ್ಮಚಿದಚಿದಾತ್ಮಕಶಕ್ತಿಯುಕ್ತನಾಗಿರುವನು. ಜೀವನ ಸ್ಥೂಲಚಿಚ್ಛಕ್ತಿಯು ಕಿಂಚಿಜ್ಜ್ಞತಾರೂಪವಾಗಿರುವುದು. ಸ್ಥೂಲಾಚಿಚ್ಛಕ್ತಿಯು ಕಿಂಚಿತ್ಕರ್ತೃತಾರೂಪವಾಗಿರುವುದು. ಶಿವನ ಸೂಕ್ಷ್ಮಚಿಚ್ಛಕ್ತಿಯು ಸರ್ವಜ್ಞತಾರೂಪವಾಗಿರುವುದು. ಸೂಕ್ಷ್ಮಾಚಿಚ್ಛಕ್ತಿಯು ಸರ್ವಕರ್ತೃತಾರೂಪವಾಗಿರುವುದು. ಈ ಉಭಯವಿಧಶಕ್ತಿಗಳಿಂದ ಯುಕ್ತರಾದ ಜೀವ ಮತ್ತು ಶಿವ ಇವರ

ಅದ್ವೈತವೇ (ಸಾಮರಸ್ಯವೇ) ಶಕ್ತಿವಿಶಿಷ್ಟಾದ್ವೈತವೆನಿಸುವುದು. ಶಕ್ತಿಯು ಪರಶಿವ ಬ್ರಹ್ಮದಲ್ಲಿ ಅವಿನಾಭಾವಸಂಬಂಧದಿಂದಿದ್ದು ನಿತ್ಯವೆನಿಸಿರುವುದು. ಈ ವಿಷಯವನ್ನು ಶ್ವೇತಾಶ್ವತರಶ್ರುತಿಯು—

ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ॥ (೬-೮)

ಎಂಬ ವಾಕ್ಯದಿಂದ ಸಾರುತ್ತಿರುವುದು. ಈ ಮಂತ್ರಾರ್ಥವನ್ನು ಪರ್ಯಾಲೋಚಿಸಿದರೆ, ಪರಬ್ರಹ್ಮದಲ್ಲಿ ಶಕ್ತಿಯು ಸ್ವಭಾವಸಿದ್ಧವಾಗಿರುವುದೆಂದೂ, ಈ ಶಕ್ತಿಯು ಜ್ಞಾನಶಕ್ತಿ-ಕ್ರಿಯಾಶಕ್ತ್ಯಾದಿರೂಪದಿಂದ ನಾನಾಪ್ರಕಾರವಾಗಿರುವುದೆಂದೂ ಸಿದ್ಧವಾಗುತ್ತದೆ. "ಸ್ವಾಭಾವಿಕೀ" ಎಂಬ ಪದವು ಶಕ್ತಿನಿತ್ಯತ್ವವನ್ನು ಘಂಟಾಘೋಷವಾಗಿ ಉದ್ಘೋಷಿಸುತ್ತಿರುವುದು. ಇದೇ ವಿಷಯವನ್ನು ಇದೇ ಶ್ರುತಿಯು ಮತ್ತೊಂದೆಡೆಯಲ್ಲಿ—

ಯದಾ ತಮಸ್ತನ್ನ ದಿವಾ ನ ರಾತ್ರಿರ್ನಸನ್ನ ಚಾಸಚ್ಛಿವ ಏವ ಕೇವಲಃ ।
ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ ಪ್ರಸೃತಾ ಪುರಾಣೀ ॥ (೪-೧೮)

ಎಂಬ ವಾಕ್ಯದಿಂದ ಪ್ರತಿಪಾದಿಸುತ್ತಿರುವುದು. ಪುರಾಣೀ-ಅನಾದಿಸಂಸಿದ್ಧವಾದ, ಪ್ರಜ್ಞಾ-ಚಿಚ್ಛಕ್ತಿಯು, ಆ ಪರಶಿವಬ್ರಹ್ಮದಿಂದ, ಪ್ರಸೃತಾ-ಕ್ರಿಯಾಶಕ್ತ್ಯಾದ್ಯನಂತರೂಪದಿಂದ ಪ್ರಸೃತವಾಯಿತು; ಎಂದು ಬೋಧಿಸುತ್ತಿರುವುದು. ಈ ಶ್ರುತಿ ವಾಕ್ಯದಲ್ಲಿ ಶಕ್ತಿವಿಕಾಸವು ಸ್ಫುಟವಾಗಿ ತೋರಿಸಲ್ಪಟ್ಟಿರುವುದು.

ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ । (೪-೧೦)

ಎಂಬ ಮಂತ್ರವೂ ಸಹ ಪರಮಾತ್ಮನು ಶಕ್ತಿವಿಶಿಷ್ಟನಾಗಿರುವನೆಂದು ಬೋಧಿಸುತ್ತಿರುವುದು. ಪೂರ್ವಾಚಾರ್ಯರು ಮಾಯಾಶಬ್ದಕ್ಕೆ "ಮಂ ಶಿವಂ-ಅಯತಿ-ಸ್ವಭಾವತಃ ಪ್ರಾಪ್ನೋತೀತಿ ಮಾಯಾ" ಎಂದು ವಿಗ್ರಹಮಾಡಿರುವುದರಿಂದ, ಈ ಮಾಯೆಯು ಅದ್ವೈತಿಗಳು ಹೇಳುವಂತೆ ಮೂಲಾವಿದ್ಯಾರೂಪಮಾಯೆಯಾಗಿರದೆ, ವಿಮರ್ಶಶಕ್ತಿರೂಪಮಾಯೆಯಾಗಿರುವುದೆಂದು ತಿಳಿಯಬೇಕು. ಈ ಮಂತ್ರಾಭಿಪ್ರಾಯವನ್ನು ಸಿದ್ಧಾಗಮವು—

ಮಂ ಶಿವಂ ಪರಮಂ ಬ್ರಹ್ಮ ಪ್ರಾಪ್ನೋತೀತಿ ಸ್ವಭಾವತಃ ।
ಮಾಯೇತಿ ಪ್ರೋಚ್ಯತೇ ಲೋಕೇ ಬ್ರಹ್ಮನಿಷ್ಠಾ ಸನಾತನೀ ॥

ಎಂಬೀ ಶ್ಲೋಕದಿಂದ ಬೋಧಿಸುತ್ತಿರುವುದು. ಯಜುರ್ವೇದತೈತ್ತಿರೀಯಸಂಹಿತೆಯು—

ಆಖುಸ್ತೇ ರುದ್ರ ಪಶುಸ್ತಂ ಜುಷಸ್ವೈಷ ತೇ ರುದ್ರಭಾಗಃ
ಸಹ ಸ್ವಸ್ರಾಂಬಿಕಯಾ ತಂ ಜುಷಸ್ವ (೧-೮-೬)

ಎಂಬೀ ಮಂತ್ರದಿಂದ ಶಕ್ತಿನಿತ್ಯತ್ವವನ್ನು ಪ್ರತಿಪಾದಿಸುತ್ತಿರುವುದು. ಈ ಮಂತ್ರದಲ್ಲಿರುವ "ಸ್ವಸ್ರಾ—ಅಂಬಿಕಯಾ" ಎಂಬ ಪದಗಳನ್ನು ಪರ್ಯಾಲೋಚಿಸಿದರೆ, ಪರಮಾತ್ಮನಲ್ಲಿ ಶಕ್ತಿಯು ಸ್ವಾಭಾವಿಕವಾಗಿರುವುದೆಂದು ಸಿದ್ಧವಾಗುವುದು.

"ನಮಃ ಸೋಮಾಯ ಚ ರುದ್ರಾಯ ಚ" (ತೈ. ಸಂ. ೪-೫-೮)

ಎಂಬ ಶ್ರೀರುದ್ರಮಂತ್ರವೂ ಸಹ, ಪರಮೇಶ್ವರನು ಉಮಾರೂಪಶಕ್ತಿಯುಕ್ತನಾಗಿರುವನೆಂದು ಬೋಧಿಸುತ್ತಿರುವುದು. ಇದೇ ಅಭಿಪ್ರಾಯವನ್ನು ಕೈವಲ್ಯಶ್ರುತಿಯು—

"ಉಮಾಸಹಾಯಂ ಪರಮೇಶ್ವರಂ ಪ್ರಭುಂ" (೧-೭)

ಎಂಬ ಮಂತ್ರದಿಂದ ಸಮರ್ಥಿಸುತ್ತಿರುವುದು. ಇದೇ ರೀತಿಯಾಗಿ ಅನೇಕಶ್ರುತಿವಾಕ್ಯಗಳು ಶಕ್ತಿನಿತ್ಯತ್ವವನ್ನೂ, ಶಿವಸಮವೇತತ್ವವನ್ನೂ ಪ್ರತಿಪಾದಿಸುತ್ತಿರುವುವು.

ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತುಪ್ರಕಾಶಿನೀ ।
ತಥಾ ಶಕ್ತಿರ್ವಿಮರ್ಶಾಖ್ಯಾ ಪ್ರಕಾಶೇ ಬ್ರಹ್ಮಣಿ ಸ್ಥಿರಾ ॥೩೨॥
ಅಂತಃಕರಣರೂಪೇಣ ಜಗದಂಕುರರೂಪತಃ ।
ಯಸ್ಮಿನ್ ವಿಭಾತಿ ಚಿಚ್ಛಕ್ತಿರ್ಬ್ರಹ್ಮಭೂತಃ ಸ ಉಚ್ಯತೇ ॥೩೬॥
(ಸಿ. ಶಿ. ಪರಿಚ್ಛೇದ ೨೦)

ಸಮಸ್ತವಸ್ತುಗಳನ್ನು ಪ್ರಕಾಶಪಡಿಸುವ ಚಂದ್ರಿಕೆಯು ಚಂದ್ರನಲ್ಲಿ ಹೇಗೆ ಸ್ಥಿರವಾಗಿರುವುದೋ, ಹಾಗೆಯೇ ಚರಾಚರಾತ್ಮಕಸಕಲಪದಾರ್ಥಗಳನ್ನು ಪ್ರಕಾಶಪಡಿಸುವ ವಿಮರ್ಶಶಕ್ತಿಯು ಪ್ರಕಾಶಸ್ವರೂಪವಾದ ಪರಬ್ರಹ್ಮದಲ್ಲಿ ಸ್ಥಿರವಾಗಿರುವುದೆಂದೂ, ವಿಮರ್ಶಶಕ್ತಿಯು ಮೂಲಾಹಂಕಾರರೂಪದಿಂದಲೂ ಸೂಕ್ಷ್ಮಜಗದ್ರೂಪದಿಂದಲೂ ಯಾವನಲ್ಲಿ ಪ್ರಕಾಶಿಸುತ್ತಿರುವುದೋ, ಅವನೇ ಪರಬ್ರಹ್ಮಸ್ವರೂಪನೆಂದೂ ಸಿದ್ಧಾಂತಶಿಖಾಮಣಿಯಲ್ಲಿ ಶಕ್ತಿಸ್ವರೂಪವು ಸ್ಫುಟವಾಗಿ ಪ್ರತಿಪಾದಿಸಲ್ಪಟ್ಟಿರುವುದು.

ಲೋಕವಿಖ್ಯಾತನಾದ ಕಾಲಿದಾಸಮಹಾಕವಿಯು ತನ್ನಿಂದ ರಚಿಸಲ್ಪಟ್ಟ ರಘುವಂಶಕಾವ್ಯದ ಆರಂಭದಲ್ಲಿ—

ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ ।
ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ ॥

ಎಂದು ಮಂಗಲವನ್ನಾಚರಿಸಿ, ಈ ಮಂಗಲಶ್ಲೋಕದಲ್ಲಿ ಪಾರ್ವತೀಪರಮೇಶ್ವರರು ಶಬ್ದಾರ್ಥದಂತೆ ನಿತ್ಯಸಂಬಂಧದಿಂದಿರುವರೆಂದು ಉಲ್ಲೇಖಿಸಿರುತ್ತಾನೆ. ಪಾರ್ವತೀಪರಮೇಶ್ವರರೆಂದರೆ ಶಕ್ತಿ-ಶಿವರೆಂದರ್ಥವು. ಶಬ್ದವನ್ನು ಬಿಟ್ಟು ಅರ್ಥವೂ, ಅರ್ಥವನ್ನು ಬಿಟ್ಟು ಶಬ್ದವೂ ಹೇಗೆ ಇರುವುದಿಲ್ಲವೋ, ಹಾಗೆಯೇ ಶಿವನನ್ನು ಬಿಟ್ಟು ಶಕ್ತಿಯೂ, ಶಕ್ತಿಯನ್ನು ಬಿಟ್ಟು ಶಿವನೂ ಇರುವುದಿಲ್ಲವೆಂದು ಈ ಮಹಾಕವಿಯ ಅಭಿಪ್ರಾಯವಾಗಿರುವುದು.

ವೀರಶೈವಸಿದ್ಧಾಂತದಲ್ಲಿ ಬ್ರಹ್ಮವು ನಿರ್ವಿಶೇಷವಾಗಿರದೆ ಸವಿಶೇಷವಾಗಿರುವುದು. ಪರಬ್ರಹ್ಮವು ಶಕ್ತಿವಿಶಿಷ್ಟವಾದುದರಿಂದ ಸವಿಶೇಷವೆನಿಸಿಕೊಳ್ಳುವುದು. ಬ್ರಹ್ಮವು ಸವಿಶೇಷವಾದುದರಿಂದಲೇ ಚರಾಚರಾತ್ಮಕಜಗದುತ್ಪತ್ತಿಕಾರಣೀಭೂತವಾಗಿರುವುದು. ಶಕ್ತಿವಿಶಿಷ್ಟಬ್ರಹ್ಮದಿಂದುತ್ಪನ್ನವಾದ ಜಗತ್ತೂಕೂಡ ಶಕ್ತಿವಿಶಿಷ್ಟವಾಗಿರುವುದು. ಈ ಜಗತ್ತಿನಲ್ಲಿರತಕ್ಕ ಪ್ರತಿಯೊಂದು ಪದಾರ್ಥವನ್ನೂ ಪರ್ಯಾಲೋಚಿಸಿದ್ದಾದರೆ, ಪ್ರತಿಯೊಂದು ಪದಾರ್ಥದಲ್ಲಿಯೂ ಒಂದೊಂದು ವಿಧವಾದ ಶಕ್ತಿಯಿರುವುದಾಗಿ ಕಂಡುಬರುವುದು. ಪೃಥಿವಿಯಲ್ಲಿ ಧಾರಣಶಕ್ತಿಯೂ, ಜಲದಲ್ಲಿ ಆಪ್ಯಾಯನಶಕ್ತಿಯೂ, ತೇಜಸ್ಸಿನಲ್ಲಿ ಉಜ್ಜ್ವಲನಶಕ್ತಿಯೂ, ವಾಯುವಿನಲ್ಲಿ ಸ್ಪಂದನಶಕ್ತಿಯೂ, ಆಕಾಶದಲ್ಲಿ ವ್ಯಾಪನಶಕ್ತಿಯೂ, ಆತ್ಮನಲ್ಲಿ ಬುದ್ಧಿಶಕ್ತಿಯೂ ಇರುವುವಷ್ಟೆ! ಅಲ್ಲದೆ ವೃಕ್ಷಾದಿಗಳಲ್ಲಿ ಜಲಾಕರ್ಷಣಾದಿಶಕ್ತಿಗಳೂ, ಅಗ್ನ್ಯಾದಿಗಳಲ್ಲಿ ದಾಹಾದಿಶಕ್ತಿಗಳೂ, ವನಸ್ಪತಿಗಳಲ್ಲಿ ಮಹಾಮಹಾರೋಗಗಳನ್ನು ಗುಣಪಡಿಸುವ ಶಕ್ತಿಯೂ, ಪಾದರಸದಲ್ಲಿ ತಾಮ್ರವನ್ನು ಸುವರ್ಣವನ್ನಾಗಿ ಮಾಡುವ ಶಕ್ತಿಯೂ, ವಜ್ರದಲ್ಲಿ ಶಿಲೆಯನ್ನು ಭೇದಿಸುವ ಶಕ್ತಿಯೂ, ಮಣಿಮಂತ್ರಾದಿಗಳಲ್ಲಿ ವಿಷಬಾಧೆಯನ್ನೂ, ಭೂತ-ಪ್ರೇತ-ಪಿಶಾಚಾದಿಗಳಿಂದುಂಟಾಗುವ ಬಾಧೆಯನ್ನೂ ಪರಿಹರಿಸುವ ಶಕ್ತಿಯೂ, ಧ್ವನ್ಯಾಕರ್ಷಕಯಂತ್ರ (ರೇಡಿಯೋ) ದಲ್ಲಿ ಧ್ವನಿಯನ್ನು ಆಕರ್ಷಿಸಿ ಅದನ್ನು ವಿಸ್ತಾರಗೊಳಿಸುವ ಶಕ್ತಿಯೂ, ವಿದ್ಯುತ್ತಿನಲ್ಲಿ ನಾನಾವಿಧಯಂತ್ರಚಾಲನಶಕ್ತಿಯೂ, ಸೂಜಿಗಲ್ಲಿನಲ್ಲಿ ಸೂಜಿಯನ್ನು ಆಕರ್ಷಿಸುವ ಶಕ್ತಿಯೂ, ಶಿಂಗಳಿಕಪ್ರಾಣಿಯಲ್ಲಿ ವಿಷವನ್ನು ಪರೀಕ್ಷಿಸುವ ಶಕ್ತಿಯೂ, ಇರುವೆಗಳಲ್ಲಿ ವೃಕ್ಷಮೂಲಾಘ್ರಾಣನದಿಂದ ವೃಕ್ಷಾಗ್ರದಲ್ಲಿರುವ ಫಲವನ್ನು ಕಂಡುಹಿಡಿಯುವ ಶಕ್ತಿಯೂ, ಒಂಟೆಯಲ್ಲಿ ಶ್ವಾಸದ್ವಾರಾ ಸರ್ಪವನ್ನು ಆಕರ್ಷಿಸುವ ಶಕ್ತಿಯೂ ಇದೇ ರೀತಿಯಾಗಿ ಬ್ರಹ್ಮಸೃಷ್ಟ್ಯಂತರ್ಗತಸಕಲಪದಾರ್ಥಗಳಲ್ಲಿಯೂ ಒಂದೊಂದು ವಿಧವಾದ ಶಕ್ತಿಯು ಇರುವುದು ಲೋಕದಲ್ಲಿ ಪ್ರತಿಯೊಬ್ಬರಿಗೂ ಪ್ರತ್ಯಕ್ಷವಾಗಿ ಕಂಡುಬರುವುದಷ್ಟೆ! ಇದರಿಂದ ಸಕಲಚರಾಚರಾತ್ಮಕವಾದ ಜಗತ್ತು ಶಕ್ತಿವಿಶಿಷ್ಟವಾಗಿರುವುದೆಂದೂ, ಇಂಥ ಶಕ್ತಿವಿಶಿಷ್ಟಜಗತ್ತನ್ನು ನಿರ್ಮಿಸಿದ ಬ್ರಹ್ಮವು ಅರ್ಥಾತ್ ಶಕ್ತಿವಿಶಿಷ್ಟವಾದುದೆಂದೂ ಸರ್ವರಿಗೂ ಅನುಭವದಿಂದ ವೇದ್ಯವಾಗುವುದು.

ಸತ್-ಚಿತ್-ಆನಂದಸ್ವರೂಪವಾದ ಪರಬ್ರಹ್ಮವು "ಅಸ್ಮಿ-ಪ್ರಕಾಶೇ-ನಂದಾಮಿ" ಅಂದರೆ 'ನಾನು ಇದ್ದೇನೆ-ಪ್ರಕಾಶಿಸುತ್ತೇನೆ-ಆನಂದಿಸುತ್ತೇನೆ' ಎಂಬ ಅನುಭವದಿಂದ ಕೂಡಿರುವುದಷ್ಟೆ! ಈ ಅನುಭವವೇ ಪರಬ್ರಹ್ಮದ ವಿಮರ್ಶಶಕ್ತಿಯು. ಈ ಅನುಭವವು ಆ ಪರಬ್ರಹ್ಮದಲ್ಲಿರದಿದ್ದರೆ, ಆ ಬ್ರಹ್ಮಕ್ಕೆ ಪ್ರಕಾಶರೂಪವಾದ ಸ್ಫಟಿಕಶಿಲೆಯಂತೆ ಜಡ

ಯಯಾ ಮಹೇಶ್ವರಃ ಶಂಭುರ್ನಾಮರೂಪಾದಿಸಂಯುತಃ ।
ತಸ್ಯೈ ಮಾಯಾಸ್ವರೂಪಾಯೈ ನಮಃ ಪರಮಶಕ್ತಯೇ ॥೯॥
ಶಿವಾದ್ಯಾಽದಿಸಮುತ್ಪನ್ನಾ ಶಾಂತ್ಯತೀತಪದೋತ್ತರಾ ।
ಮಾತರಂ ತಾಂ ಸಮಸ್ತಾನಾಂ ವಂದೇ ಶಿವಕರೀಂ ಶಿವಾಂ ॥೧೦॥
ಇಚ್ಛಾಜ್ಞಾನಾದಿರೂಪೇಣ ಯಾ ಶಂಭೋರ್ವಿಶ್ವಭಾವಿನೀ ।
ವಂದೇ ತಾಂ ಪರಮಾನಂದಪ್ರಬೋಧಲಹರೀಂ ಶಿವಾಂ ॥೧೧॥
ಅಮೃತಾರ್ಥಂ ಪ್ರಪನ್ನಾನಾಂ ಯಾ ಸುವಿದ್ಯಾಪ್ರದಾಯಿನೀ ।
ಅಹರ್ನಿಶಮಹಂ ವಂದೇ ತಾಮೀಶಾನಮನೋರಮಾಂ ॥೧೨॥

---

ವೆಂದು ಹೇಳಬೇಕಾಗುವ ಪ್ರಸಂಗವು ಬರುವುದು. ಸೌಂದರ್ಯವಿಶಿಷ್ಟನಾದ ಅಂಧನಿಗೆ ತನ್ನ ಸೌಂದರ್ಯವನ್ನು ತಿಳಿಯುವ ಶಕ್ತಿಯಿಲ್ಲದಿರುವುದರಿಂದ ಅವನಿಗೆ ಅವನ ಸೌಂದರ್ಯವು ವ್ಯರ್ಥವಾಗುವಂತೆ, ಬ್ರಹ್ಮಕ್ಕೆ ತನ್ನ ಸಚ್ಚಿದಾನಂದಸ್ವರೂಪವನ್ನು ತಿಳಿಯುವ ಶಕ್ತಿಯಿಲ್ಲದಿದ್ದರೆ, ತನ್ನಲ್ಲಿರುವ ಸಚ್ಚಿದಾನಂದಸ್ವರೂಪವು ವ್ಯರ್ಥವಾಗುವದಷ್ಟೆ ! ಆದುದರಿಂದ ಬ್ರಹ್ಮದಲ್ಲಿ ಸಚ್ಚಿದಾನಂದರೂಪಾನುಭವಶಕ್ತಿಯನ್ನು ಒಪ್ಪಲೇಬೇಕಾಗುವುದು. ಇದರಿಂದ ಬ್ರಹ್ಮವು ಶಕ್ತಿವಿಶಿಷ್ಟವೆಂದು ಸಿದ್ಧವಾಗುವುದು. ಇಂತಹ ಶಕ್ತಿವಿಶಿಷ್ಟಪರಬ್ರಹ್ಮವು "ಅಥಾತೋ ಬ್ರಹ್ಮಜಿಜ್ಞಾಸಾ" "ಚೈತನ್ಯಮಾತ್ಮಾ" ಇತ್ಯಾದಿಬ್ರಹ್ಮಸೂತ್ರ-ಶಿವಸೂತ್ರಮಯವೇದಾಂತಶಾಸ್ತ್ರಪ್ರತಿಪಾದ್ಯವಾಗಿರುವುದು.॥೮॥

ತನ್ನಲ್ಲಿ ನಿತ್ಯಸಂಬಂಧದಿಂದಿರುವ ಯಾವ ಶಕ್ತಿಯಿಂದ ಪರಮೇಶ್ವರನು ನಾಮರೂಪಕ್ರಿಯಾದಿಗಳಿಂದ ಕೂಡಿದವನಾಗಿರುವನೋ, ಜಗದುತ್ಪತ್ತಿಕಾರಣೀಭೂತಮೂಲಪ್ರಕೃತಿಸ್ವರೂಪಳಾದ ಆ ಪರಮಶಕ್ತಿಗೆ ನಮಸ್ಕಾರವು. ॥೯॥ ಶಾಂತ್ಯತೀತೋತ್ತರಕಲಾ (ವಿಮರ್ಶಶಕ್ತಿ) ಸ್ವರೂಪಳಾದ ಯಾವಳು ಪರಶಿವನಿಂದ ಸೃಷ್ಟ್ಯಾದಿಯಲ್ಲಿ ಆವಿರ್ಭವಿಸಿದಳೋ, ಸಮಸ್ತಜಗತ್ತುಗಳಿಗೆ ಮಾತೃಸ್ವರೂಪಳೂ ಮಂಗಲಕರಳೂ ಆದ ಆ ಸರ್ವಮಂಗಲಾದೇವಿಯನ್ನು ನಮಸ್ಕರಿಸುತ್ತೇನೆ. ॥೧೦॥ ಯಾವಳು ಪರಶಿವನ ಜ್ಞಾನಶಕ್ತಿ - ಕ್ರಿಯಾಶಕ್ತಿ - ಇಚ್ಛಾಶಕ್ತ್ಯಾದಿರೂಪದಿಂದ ಜಗತ್ತನ್ನು ಪ್ರಕಾಶಪಡಿಸುತ್ತಿರುವಳೋ,ಚಿದಾನಂದಲಹರೀಸ್ವರೂಪಳಾದ ಆ ಉಮಾದೇವಿಯನ್ನು ನಮಸ್ಕರಿಸುತ್ತೇನೆ. ॥೧೧॥ ಮುಕ್ತಿಗೋಸುಗ ತನ್ನನ್ನಾಶ್ರಯಿಸಿ ಶರಣಾಗತರಾದವರಿಗೆ ಯಾವಳು ತತ್ತ್ವಮಸ್ಯಾದಿಮಹಾವಾಕ್ಯಪ್ರಕಾಶಿತಶಿವಜೀವೈಕ್ಯವಿದ್ಯೆಯನ್ನು ಅನುಗ್ರಹಿಸುವಳೋ, ಆ ಪರಶಿವಶಕ್ತಿಯನ್ನು ಹಗಲಿರುಳೂ ನಮಸ್ಕರಿಸುತ್ತೇನೆ. ॥೧೨॥

ಆಸೀದಾಚಾರಸಿದ್ಧಾನಾಮಗ್ರಣೀಃ ಶಿವಯೋಗಿನಾಮ್ ।
ಶಿವಯೋಗೀತಿ ವಿಖ್ಯಾತಃ ಶಿವಜ್ಞಾನಮಹೋದಧಿಃ ॥೧೩॥
ಶಿವಭಕ್ತಿಸುಧಾಸಿಂಧುಜೃಂಭಣಾಮಲಚಂದ್ರಿಕಾ ।
ಭಾರತೀ ಯಸ್ಯ ವಿದಧೇ ಪ್ರಾಯಃ ಕುವಲಯೋತ್ಸವಮ್ ॥೧೪॥
ತಸ್ಯ ವಂಶೇ ಸಮುತ್ಪನ್ನೋ ಮುಕ್ತಾಮಣಿರಿವಾಮಲಃ ।
ಮುದ್ದದೇವಾಭಿಧಾಚಾರ್ಯೋ ಮೂರ್ಧನ್ಯಶ್ಶಿವಯೋಗಿನಾಮ್ ॥೧೫॥
ಮುದ್ದಾನಾತ್ಸರ್ವಜಂತೂನಾಂ ಪ್ರಣತಾನಾಂ ಪ್ರಬೋಧತಃ ।
ಮುದ್ದದೇವ ಇತಿ ಖ್ಯಾತಾ ಸಮಾಖ್ಯಾ ಯಸ್ಯ ವಿಶ್ರುತಾ ॥೧೬॥
ತಸ್ಯಾಸೀನ್ನಂದನಃ ಶಾಂತಃ ಸಿದ್ಧನಾಥಾಭಿಧಃ ಶುಚಿಃ ।
ಶಿವಸಿದ್ಧಾಂತನಿರ್ಣೇತಾ ಶಿವಾಚಾರ್ಯಃ ಶಿವಾತ್ಮಕಃ ॥೧೭॥

---

## ಈ ಗ್ರಂಥಕರ್ತರಾದ
## ಶ್ರೀಶಿವಯೋಗಿಶಿವಾಚಾರ್ಯರ ವಂಶವರ್ಣನೆ.

ಸದಾಚಾರಸಂಪನ್ನರಾದ ಶಿವಯೋಗಿಗಳಲ್ಲಿ ಅಗ್ರಗಣ್ಯನೂ, ಶಿವಜ್ಞಾನಕ್ಕೆ ಸಮುದ್ರಸ್ವರೂಪನೂ ಆದ "ಶಿವಯೋಗಿಶಿವಾಚಾರ್ಯ" ನೆಂಬ ಆಚಾರ್ಯನು ಈ ಗ್ರಂಥಕರ್ತನ ವಂಶದಲ್ಲಿ ಪ್ರಸಿದ್ಧನಾದನು. ॥೧೩॥ ಯಾವ ಶಿವಾಚಾರ್ಯನ ದಿವ್ಯವಾಣಿಯು ಶಿವಭಕ್ತಿರೂಪಸುಧಾಸಮುದ್ರವನ್ನು ಉಕ್ಕೇರಿಸುವುದರಲ್ಲಿ ಸ್ವಚ್ಛವಾದ ಚಂದ್ರಿಕಾಸ್ವರೂಪವಾಗಿದ್ದು, ಭೂಮಂಡಲವೆಂಬ ಕುವಲಯಕ್ಕೆ ಸಂತೋಷವನ್ನುಂಟುಮಾಡಿತೋ, ಆ ಶಿವಯೋಗಿಶಿವಾಚಾರ್ಯನ ವಂಶಾಬ್ಧಿಯಲ್ಲಿ ನಿರ್ಮಲವಾದ ಮುತ್ತಿನಂತೆ, ಶಿವಯೋಗಿಶಿಖಾಮಣಿಯಾದ "ಮುದ್ದದೇವಶಿವಾಚಾರ್ಯ" ನೆಂಬ ಆಚಾರ್ಯನು ಜನಿಸಿದನು. ॥೧೪-೧೫॥ ಶರಣಾಗತವಾದ ಸಮಸ್ತಪ್ರಾಣಿವರ್ಗಕ್ಕೆ ಸದ್ಬೋಧೆಯಿಂದ ಸಂತೋಷವನ್ನುಂಟುಮಾಡುವುದರಿಂದ, ಯಾವ ಆಚಾರ್ಯನಿಗೆ "ಮುದ್ದದೇವ" ಎಂಬ ಹೆಸರು ಸರ್ವತ್ರ ಪ್ರಸಿದ್ಧವಾಯಿತೋ, ಆ ಮುದ್ದದೇವಶಿವಾಚಾರ್ಯನಿಗೆ ಶಾಂತನೂ, ಪವಿತ್ರನೂ, ಶಿವಸ್ವರೂಪನೂ, ಶಿವಾದ್ವೈತಸಿದ್ಧಾಂತನಿರ್ಣಾಯಕನೂ ಆದ "ಸಿದ್ಧನಾಥಶಿವಾಚಾರ್ಯ" ನೆಂಬ ಹೆಸರಿನ ಪುತ್ರನು ಜನಿಸಿದನು. ॥೧೬-೧೭॥

ವೀರಶೈವಶಿಖಾರತ್ನಂ ವಿಶಿಷ್ಟಾಚಾರಸಂಪದಂ ।
ಶಿವಜ್ಞಾನಮಹಾಸಿಂಧುಂ ಯಂ ಪ್ರಶಂಸಂತಿ ದೇಶಿಕಾಃ ॥೧೮॥

ಯದಾಚಾರ್ಯಕುಲೇ ಜಾತಾ ಸತಾಮಾಚಾರಮಾತೃಕಾ ।
ಶಿವಭಕ್ತಿಃ ಸ್ಥಿರಾ ಯಸ್ಮಿನ್ ಜಜ್ಞೇ ವಿಗತವಿಪ್ಲವಾ ॥೧೯॥

ತಸ್ಯ ವೀರಶಿವಾಚಾರ್ಯಶಿಖಾರತ್ನಸ್ಯ ನಂದನಃ ।
ಅಭವಚ್ಛಿವಯೋಗೀತಿ ಸಿಂಧೋರಿವ ಸುಧಾಕರಃ ॥೨೦॥

ಚಿದಾನಂದಪರಾಕಾಶಶಿವಾನುಭವಯೋಗತಃ ।
ಶಿವಯೋಗೀತಿ ನಾಮೋಕ್ತಿರ್ಯಸ್ಯ ಯಾಥಾರ್ಥ್ಯಯೋಗಿನೀ ॥೨೧॥

ಶಿವಾಗಮಪರಿಜ್ಞಾನಪರಿಪಾಕಸುಗಂಧಿನಾ ।
ಯದೀಯಕೀರ್ತಿಪುಷ್ಪೇಣ ವಾಸಿತಂ ಹರಿತಾಂ ಮುಖಂ ॥೨೨॥

ಯೇನ ರಕ್ಷಾವತೀ ಜಾತಾ ಶಿವಭಕ್ತಿಃ ಸನಾತನೀ ।
ಬೌದ್ಧಾದಿಪ್ರತಿಸಿದ್ಧಾಂತಮಹಾಧ್ವಾಂತಾಂಶುಮಾಲಿನಾ ॥೨೩॥

---

ಯಾವನನ್ನು ಆಚಾರ್ಯರು ವೀರಶೈವವೃಂದಕ್ಕೆ ಶಿಖಾಮಣಿಸ್ವರೂಪನನ್ನಾಗಿಯೂ, ಶ್ರೇಷ್ಠವಾದ ಆಚಾರವೇ ಸಂಪತ್ತುಳ್ಳವನನ್ನಾಗಿಯೂ, ಶಿವಜ್ಞಾನಕ್ಕೆ ಮಹಾಸಾಗರಸ್ವರೂಪನನ್ನಾಗಿಯೂ ಮುಕ್ತಕಂಠದಿಂದ ಹೊಗಳುತ್ತಾರೆಯೋ, ಯಾವ ಆಚಾರ್ಯನ ವಂಶದಲ್ಲಿ ಸದಾಚಾರಗಳ ಮೂಲವು ಉತ್ಪನ್ನವಾಯಿತೋ, ಯಾವ ಆಚಾರ್ಯನಲ್ಲಿ ನಿರುಪದ್ರುವವಾದ ಶಿವಭಕ್ತಿಯು ಸ್ಥಿರವಾಯಿತೋ, ವೀರಶೈವಾಚಾರ್ಯರಿಗೆ ಶಿಖಾರತ್ನಸ್ವರೂಪನಾದ ಆ ಸಿದ್ಧನಾಥಶಿವಾಚಾರ್ಯನಿಗೆ, ಸಮುದ್ರದಿಂದ ಚಂದ್ರನು ಉದಯಿಸುವಂತೆ, "ಶಿವಯೋಗಿಶಿವಾಚಾರ್ಯ" ನೆಂಬ ಹೆಸರಿನ ಪುತ್ರನು ಉದಯಿಸಿದನು. ॥೧೮-೧೯-೨೦॥

## ಶ್ರೀಶಿವಯೋಗಿಶಿವಾಚಾರ್ಯರ ವರ್ಣನೆ.

ಚಿದಾನಂದಸ್ವರೂಪನೂ ಪರಾಕಾಶಸ್ವರೂಪನೂ ಆದ ಪರಶಿವನ ಸ್ವರೂಪಾನುಭವದಿಂದ "ಶಿವಯೋಗಿ" ಎಂಬ ನಾಮವು ಯಾವ ಆಚಾರ್ಯನಲ್ಲಿ ಯಥಾರ್ಥವಾಗಿ ಅನ್ವಯಿಸುವುದೋ, ಶಿವಾಗಮಜ್ಞಾನದ ಪರಿಪಾಕದಿಂದ ಅತ್ಯಂತ ಸುಗಂಧಿತವಾದ ಯಾವ ಆಚಾರ್ಯನ ಕೀರ್ತಿಕುಸುಮವು ದಶದಿಕ್ಕುಗಳನ್ನು ಸುಗಂಧವಿಶಿಷ್ಟವನ್ನಾಗಿ ಮಾಡಿತೋ, ಬೌದ್ಧಾದಿಪ್ರತಿಕೂಲಸಿದ್ಧಾಂತಗಳೆಂಬ ಮಹಾಂಧಕಾರಕ್ಕೆ ಸೂರ್ಯನಂತಿರುವ ಯಾವ ಆಚಾರ್ಯನಿಂದ ಸನಾತನವಾದ ಶಿವಭಕ್ತಿಯು

ಸ ಮಹಾವೀರಶೈವಾನಾಂ ಧರ್ಮಮಾರ್ಗಪ್ರವರ್ತಕಃ ।
ಶಿವತತ್ತ್ವಪರಿಜ್ಞಾನಚಂದ್ರಿಕಾವೃತಚಂದ್ರಮಾಃ ॥೨೪॥

ಆಲೋಕ್ಯ ಶೈವತಂತ್ರಾಣಿ ಕಾಮಿಕಾದ್ಯಾನಿ ಸಾದರಂ ।
ವಾತುಲಾಂತಾನಿ ಶೈವಾನಿ ಪುರಾಣಾನ್ಯಖಿಲಾನಿ ತು ॥೨೫॥

ವೇದಮಾರ್ಗಾವಿರೋಧೇನ ವಿಶಿಷ್ಟಾಚಾರಸಿದ್ಧಯೇ ।
ಅಸನ್ಮಾರ್ಗನಿರಾಸಾಯ ಪ್ರಮೋದಾಯ ವಿವೇಕಿನಾಂ ॥೨೬॥

ಸರ್ವಸ್ವಂ ವೀರಶೈವಾನಾಂ ಸಕಲಾರ್ಥಪ್ರಕಾಶಕಂ ।
ಅಸ್ಪೃಷ್ಟಮಖಿಲೈರ್ದೋಷೈರಾದೃತಂ ಶುದ್ಧಮಾನಸೈಃ ॥೨೭॥

ಶೈವಾಗಮೇಷು ಸರ್ವೇಷು ಪುರಾಣೇಷ್ವಖಿಲೇಷು ಚ ।
ಪುರಾ ದೇವೇನ ಕಥಿತಂ ದೇವ್ಯೈ ತನ್ನಂದನಾಯ ಚ ॥೨೮॥

ತತ್ಸಂಪ್ರದಾಯಸಿದ್ಧೇನ ರೇಣುಕೇನ ಮಹಾತ್ಮನಾ ।
ಗಣೇಶ್ವರೇಣ ಕಥಿತಮಗಸ್ತ್ಯಾಯ ಪುನಃ ಕ್ಷಿತೌ ॥೨೯॥

ವೀರಶೈವಮಹಾತಂತ್ರಮೇಕೋತ್ತರಶತಸ್ಥಲಂ ।
ಅನುಗ್ರಹಾಯ ಲೋಕಾನಾಮಭ್ಯಧಾತ್ ಸುಧಿಯಾಂವರಃ ॥೩೦॥

---

ರಕ್ಷಿಸಲ್ಪಟ್ಟತೋ, ಶಿವತತ್ತ್ವಜ್ಞಾನವೆಂಬ ಚಂದ್ರಿಕೆಯಿಂದಾವೃತನಾದ ಚಂದ್ರನಂತಿರುವವನೂ, ವೀರಶೈವಧರ್ಮಮಾರ್ಗಪ್ರವರ್ತಕನೂ ಆದ ಆ ಶಿವಯೋಗಿ ಶಿವಾಚಾರ್ಯನು, ಕಾಮಿಕಾದಿವಾತುಲಾಂತವಾದ ಇಪ್ಪತ್ತೆಂಟು ಶಿವಾಗಮಗಳನ್ನೂ, ಸಮಸ್ತಪುರಾಣಗಳನ್ನೂ ಕೂಲಂಕಷವಾಗಿ ಪರಾಮರ್ಶಿಸಿ, ವೇದಮಾರ್ಗಕ್ಕೆ ಅನುಕೂಲವಾಗಿರುವ ಸಮಸ್ತಧರ್ಮಾಚಾರಗಳ ಸಿದ್ಧಿಗಾಗಿಯೂ, ಅಸತ್ಯಮಾರ್ಗಪ್ರವಿಷ್ಟ ಬೌದ್ಧಾದಿಸಿದ್ಧಾಂತಗಳ ನಿರಸನಕ್ಕಾಗಿಯೂ, ಜ್ಞಾನಿಗಳ ಮನಸ್ಸಂತೋಷಕ್ಕಾಗಿಯೂ, ಸಕಲನಿಗಮಾಗಮಾರ್ಥಪ್ರಕಾಶಕವಾದ, ನಿರ್ಮಲಹೃದಯರಾದ ಜ್ಞಾನಿಗಳಿಂದ ಅಂಗೀಕೃತವಾದ, ಸಮಸ್ತದೋಷಗಳಿಂದ ದೂರೀಕೃತವಾದ, ಸಮಸ್ತಪುರಾಣಾಗಮಾದಿಗಳಲ್ಲಿ ಶಿವನಿಂದ ಪಾರ್ವತಿಗೂ ಷಣ್ಮುಖನಿಗೂ ಉಪದಿಷ್ಟವಾದ, ಶಿವಸಂಪ್ರದಾಯಸ್ಥಾಪಕನೂ ಮಹಾತ್ಮನೂ ಆದ ಶ್ರೀರೇಣುಕಗಣಾಧೀಶ್ವರನು ಈ ಭೂಮಂಡಲದಲ್ಲಿ ದಿವ್ಯದೇಹಧಾರಿಯಾಗಿ ಅವತರಿಸಿ ಅಗಸ್ತ್ಯಮಹರ್ಷಿಗೆ ಉಪದೇಶಿಸಿದ, ನೂರೊಂದುಸ್ಥಲಗಳಿಂದ ಕೂಡಿದ ವೀರಶೈವಮಹಾಶಾಸ್ತ್ರವನ್ನು ಲೋಕಾನುಗ್ರಹಕ್ಕಾಗಿ ಬೋಧಿಸಿದನು. ॥೨೧-೨೨-೨೩-೨೪-೨೫-೨೬-೨೭-೨೮-೨೯-೩೦॥

ಸರ್ವೇಷಾಂ ಶೈವತಂತ್ರಾಣಾಮುತ್ತರತ್ವಾನ್ನಿರುತ್ತರಂ ।
ನಾಮ್ನಾ ಪ್ರತೀಯತೇ ಲೋಕೇ ಯತ್ಸಿದ್ಧಾಂತಶಿಖಾಮಣಿಃ ॥೩೧॥

ಅನುಗತಸಕಲಾರ್ಥೇ ಶೈವತಂತ್ರೈಃ ಸಮಸ್ತೈಃ
ಪ್ರಕಟಿತಶಿವಬೋಧಾದ್ವೈತಭಾವಪ್ರಸಾದೇ ।
ವಿದಧತು ಮತಿಮುಸ್ಮಿನ್ ವೀರಶೈವಾ ವಿಶಿಷ್ಟಾಃ
ಪಶುಪತಿಮತಸಾರೇ ಪಂಡಿತಶ್ಲಾಘನೀಯೇ ॥೩೨॥

ಇತಿ ಶ್ರೀಸಿದ್ಧಾಂತಶಿಖಾಮಣೌ ಶಿವಯೋಗಿಶಿವಾಚಾರ್ಯ
ವಂಶವರ್ಣನಂ ನಾಮ
ಪ್ರಥಮಪರಿಚ್ಛೇದಃ ಪರಿಸಮಾಪ್ತಃ



---

ಯಾವ ಈ ವೀರಶೈವಮಹಾತಂತ್ರವು ಸಮಸ್ತಶೈವತಂತ್ರಗಳಲ್ಲಿ ಶ್ರೇಷ್ಠವಾಗಿರುವುದರಿಂದ ಅತ್ಯಂತಶ್ರೇಷ್ಠವಾದುದಾಗಿ, ಲೋಕದಲ್ಲಿ "ಸಿದ್ಧಾಂತಶಿಖಾಮಣಿ" ಎಂಬ ಹೆಸರಿನಿಂದ ಪ್ರಖ್ಯಾತವಾಗಿರುವುದು. ॥೩೧॥ ಸಮಸ್ತಶಿವಾಗಮಗಳನ್ನನುಸರಿಸುತ್ತಿರುವ ರಹಸ್ಯಾರ್ಥವನ್ನು ಪ್ರತಿಪಾದಿಸತಕ್ಕದ್ದೂ, ಶಿವಜ್ಞಾನದಿಂದುಂಟಾಗುವ ಶಿವಾದ್ವೈತಭಾವರೂಪಪ್ರಸಾದವನ್ನು ಪ್ರಕಟಿಸತಕ್ಕದ್ದೂ, ಶಿವಮತದ ಸಾರವುಳ್ಳುದೂ, ಪಂಡಿತಮಂಡಲಿಯಿಂದ ಶ್ಲಾಘನೀಯವಾದುದೂ ಆಗಿರುವ ಈ ಸಿದ್ಧಾಂತಶಿಖಾಮಣಿಯಲ್ಲಿ ವೀರಶೈವೋತ್ತಮರು ಪೂಜ್ಯಬುದ್ಧಿಯನ್ನಿಡಬೇಕು. ॥೩೨॥

ಇಂತು ಶ್ರೀಸಿದ್ಧಾಂತಶಿಖಾಮಣಿಯಲ್ಲಿ ಶಿವಯೋಗಿಶಿವಾಚಾರ್ಯ
ವಂಶವರ್ಣನಾತ್ಮಕವಾದ
ಒಂದನೆಯ ಪರಿಚ್ಛೇದವು ಪರಿಸಮಾಪ್ತವಾದುದು.



ಶ್ರೀಜಗದ್ಗುರು ರೇಣುಕಾಚಾರ್ಯಃ ಪ್ರಸೀದತು.

# ದ್ವಿತೀಯಪರಿಚ್ಛೇದಃ

ಸಚ್ಚಿದಾನಂದರೂಪಾಯ ಸದಸದ್ವ್ಯಕ್ತಿಹೇತವೇ ।
ನಮಃ ಶಿವಾಯ ಸಾಂಬಾಯ ಸಗಣಾಯ ಸ್ವಯಂಭುವೇ ॥೧॥

ಸದಾಶಿವಮುಖಾಶೇಷತತ್ತ್ವಮೌಕ್ತಿಕಶುಕ್ತಿಕಾಂ ।
ವಂದೇ ಮಾಹೇಶ್ವರೀಂ ಶಕ್ತಿಂ ಮಹಾಮಾಯಾದಿರೂಪಿಣೀಂ ॥೨॥

ಅಸ್ತಿ ಸಚ್ಚಿತ್ಸುಖಾಕಾರಮಲಕ್ಷಣಪದಾಸ್ಪದಂ ।
ನಿರ್ವಿಕಲ್ಪಂ ನಿರಾಕಾರಂ ನಿರಸ್ತಾಶೇಷವಿಪ್ಲವಂ ॥೩॥

ಪರಿಚ್ಛೇದಕಥಾಶೂನ್ಯಂ ಪ್ರಪಂಚಾತೀತವೈಭವಂ ।
ಪ್ರತ್ಯಕ್ಷಾದಿಪ್ರಮಾಣಾನಾಮಗೋಚರಪದೇ ಸ್ಥಿತಂ ॥೪॥

ಸ್ವಪ್ರಕಾಶಂ ಪರಾಕಾಶಮನೌಪಮ್ಯಮನಾಮಯಂ ।
ಸರ್ವಜ್ಞಂ ಸರ್ವಗಂ ಶಾಂತಂ ಸರ್ವಶಕ್ತಿ ನಿರಂಕುಶಂ ॥೫॥

---

## ಎರಡನೆಯ ಪರಿಚ್ಛೇದವು.

### ಜಗತ್ಸೃಷ್ಟಿವಿಚಾರ.

ವ್ಯಾಖ್ಯಾನ—ಸಚ್ಚಿದಾನಂದಸ್ವರೂಪನೂ, ಚೇತನಾಚೇತನಾತ್ಮಕಪ್ರಪಂಚ ನಿರ್ಮಾಣಕಾರಣೀಭೂತನೂ, ಪ್ರಮಥಗಣಸಹಿತನೂ, ಪಾರ್ವತೀಯುತನೂ, ಸ್ವಯಂಭುವೂ ಆಗಿರುವ ಪರಶಿವನಿಗೆ ನಮಸ್ಕಾರವು. ॥೧॥ ಶಿವಾದಿಭೂಮ್ಯಂತವಾದ ಮೂವತ್ತಾರುತತ್ತ್ವಗಳೆಂಬ ಮುತ್ತುಗಳಿಗೆ ಶುಕ್ತಿಕಾಸ್ವರೂಪಳೂ, ವಿಮರ್ಶಶಕ್ತಿ ರೂಪೋರ್ಧ್ವಮಾಯಾದಿಸ್ವರೂಪಳೂ ಆಗಿರುವ ಶಕ್ತಿಯನ್ನು ನಮಸ್ಕರಿಸುತ್ತೇನೆ. ॥೨॥ ಸಚ್ಚಿದಾನಂದಸ್ವರೂಪವೂ, ಮೋಕ್ಷಸ್ಥಾನಭೂತವೂ, ನಿರ್ವಿಕಲ್ಪವೂ, ನಿರಾಕಾರವೂ, (ಹೇಯಾಕಾರರಹಿತವೂ) ಸಮಸ್ತೋಪದ್ರವದೂರವೂ, ಪರಿಚ್ಛೇದವಾರ್ತಾ ಶೂನ್ಯವೂ, ಸೀಮಾತೀತವೈಭವಯುತವೂ, ಪ್ರತ್ಯಕ್ಷಾದಿಪ್ರಮಾಣಗಳಿಗೆ ಅಗೋಚರವೂ, ಸ್ವತಃಪ್ರಕಾಶಮಾನವೂ, ಪರಾಕಾಶಸ್ವರೂಪವೂ, ಉಪಮಾತೀತವೂ, ಜನನಮರಣಾದಿದೋಷರಹಿತವೂ, ಸರ್ವಜ್ಞವೂ, ಸಕಲಚರಾಚರಾತ್ಮಕಪ್ರಪಂಚ ವ್ಯಾಪಕವೂ, ಶಾಂತವೂ, ನಾನಾವಿಧಶಕ್ತಿಸಮನ್ವಿತವೂ, ಪ್ರತಿಬಂಧರಹಿತವೂ

ಶಿವರುದ್ರಮಹಾದೇವಭವಾದಿಪದಸಂಜ್ಞಿತಂ ।
ಅದ್ವಿತೀಯಮನಿರ್ದೇಶ್ಯಂ ಪರಂ ಬ್ರಹ್ಮ ಸನಾತನಂ ॥೬॥

ತತ್ರ ಲೀನಮಭೂತ್ ಪೂರ್ವಂ ಚೇತನಾಚೇತನಂ ಜಗತ್ ।
ಸ್ವಾತ್ಮಲೀನಂ ಜಗತ್ಕಾರ್ಯಂ ಸ್ವಪ್ರಕಾಶ್ಯಂ ತದದ್ಭುತಂ ॥೭॥

ಶಿವಾಭಿಧಂ ಪರಂ ಬ್ರಹ್ಮ ಜಗನ್ನಿರ್ಮಾತುಮಿಚ್ಛಯಾ ।
ಸ್ವರೂಪಮಾದಧೇ ಕಿಂಚಿತ್ ಸುಖಸ್ಫೂರ್ತಿವಿಜೃಂಭಿತಂ ॥೮॥

ನಿರಸ್ತದೋಷಸಂಬಂಧಂ ನಿರುಪಾಧಿಕಮವ್ಯಯಂ ।
ದಿವ್ಯಮಪ್ರಾಕೃತಂ ನಿತ್ಯಂ ನೀಲಕಂಠಂ ತ್ರಿಲೋಚನಂ ॥೯॥

ಚಂದ್ರಾರ್ಧಶೇಖರಂ ಶುದ್ಧಂ ಶುದ್ಧಸ್ಫಟಿಕಸನ್ನಿಭಂ ।
ಶುದ್ಧಮುಕ್ತಾಫಲಾಭಾಸಮುಪಾಸ್ಯಂ ಗುಣಮೂರ್ತಿಭಿಃ ॥೧೦॥

ವಿಶುದ್ಧಜ್ಞಾನಕರಣಂ ವಿಷಯಂ ಸರ್ವಯೋಗಿನಾಂ ।
ಕೋಟಿಸೂರ್ಯಪ್ರತೀಕಾಶಂ ಚಂದ್ರಕೋಟಿಸಮಪ್ರಭಂ ॥
ಅಪ್ರಾಕೃತಗುಣಾಧಾರಮನಂತಮಹಿಮಾಸ್ಪದಂ ॥೧೧॥

---

ಶಿವ-ರುದ್ರ-ಮಹಾದೇವ-ಭವಾದಿನಾಮಯುತವೂ, ಸನಾತನವೂ, ಅನಿರ್ದೇಶ್ಯವೂ, ಅದ್ವಿತೀಯವೂ ಆದ ಪರಬ್ರಹ್ಮವು ಪ್ರಕಾಶಿಸುತ್ತಿರುವುದು.॥೩-೪-೫-೬॥ ಆ ಪರಬ್ರಹ್ಮದಲ್ಲಿ ಸೃಷ್ಟಿಗಿಂತಲೂ ಮೊದಲು ಚೇತನಾಚೇತನಾತ್ಮಕವಾದ ಜಗತ್ತು ಉಭಯೇಂದ್ರಿಯಗಳಿಗೆ ಅಗೋಚರವಾಗಿ ಅಡಗಿಕೊಂಡಿದ್ದಿತು; ಈ ರೀತಿಯಾಗಿ ತನ್ನಲ್ಲಿಯೇ ಅಡಗಿಕೊಂಡುದುದಾಗಿಯೂ, ಅದ್ಭುತವಾದುದಾಗಿಯೂ, ಕಾರ್ಯರೂಪವಾದುದಾಗಿಯೂ ಇರುವ ಆ ಜಗತ್ತು, ತನ್ನಿಂದಲೇ ಪ್ರಕಾಶಪಡಿಸಲ್ಪಡಲು ಯೋಗ್ಯವಾಗುವುದು. ॥೭॥ ಶಿವನಾಮಕವಾದ ಆ ಪರಬ್ರಹ್ಮವು ಜಗತ್ತನ್ನು ನಿರ್ಮಾಣಮಾಡಬೇಕೆಂಬ ಇಚ್ಛೆಯಿಂದ, ಜನನಮರಣಾದಿಸಕಲದೋಷಶೂನ್ಯವೂ, ಉಪಾಧಿದೂರವೂ, ನಾಶರಹಿತವೂ, ದಿವ್ಯವೂ, ಅಪ್ರಾಕೃತವೂ, ನಿತ್ಯವೂ, ನೀಲಕಂಠಯುತವೂ, ತ್ರಿಲೋಚನಯುತವೂ, ಚಂದ್ರಧಾರಣಯುತವೂ, ಶುದ್ಧವೂ, ಶುದ್ಧಸ್ಫಟಿಕಸದೃಶವೂ, ಶುದ್ಧಮೌಕ್ತಿಕಸಮಾನಕಾಂತಿಯುತವೂ, ಬ್ರಹ್ಮಾದಿಗುಣಮೂರ್ತಿಗಳಿಂದ ಉಪಾಸ್ಯವೂ, ಶುದ್ಧಜ್ಞಾನಕಾರಣೀಭೂತವೂ, ಸಮಸ್ತಯೋಗಿಗಳಿಗೆ ವಿಷಯವೂ, ಕೋಟಿಸೂರ್ಯಸಮಾನಪ್ರಕಾಶಯುತವೂ, ಕೋಟಿಚಂದ್ರಸಮಾನಕಾಂತಿಮಯವೂ, ಅಪ್ರಾಕೃತ

ತದೀಯಾ ಪರಮಾಶಕ್ತಿಃ ಸಚ್ಚಿದಾನಂದಲಕ್ಷಣಾ ।
ಸಮಸ್ತಲೋಕನಿರ್ಮಾಣಸಮವಾಯಸ್ವರೂಪಿಣೀ ॥
ತದಿಚ್ಛಯಾಽಭವತ್ ಸಾಕ್ಷಾತ್ತತ್ಸ್ವರೂಪಾನುಕಾರಿಣೀ ॥೧೨॥

ಸ ಶಂಭುರ್ಭಗವಾನ್ ದೇವಃ ಸರ್ವಜ್ಞಃ ಸರ್ವಶಕ್ತಿಕಃ ।
ಜಗತ್ಸಿಸೃಕ್ಷುಃ ಪ್ರಥಮಂ ಬ್ರಹ್ಮಾಣಂ ಸರ್ವದೇಹಿನಾಂ ॥
ಕರ್ತಾರಂ ಸರ್ವಲೋಕಾನಾಂ ವಿದಧೇ ವಿಶ್ವನಾಯಕಃ ॥೧೪॥

ತಸ್ಮೈ ಪ್ರಥಮಪುತ್ರಾಯ ಶಂಕರಃ ಶಕ್ತಿಮಾನ್ ವಿಭುಃ ।
ಸರ್ವಜ್ಞಃ ಸಕಲಾ ವಿದ್ಯಾಃ ಸಾನುಗ್ರಹಮುಪಾದಿಶತ್ ॥೧೫॥

ಪ್ರಾಪ್ತವಿದ್ಯೋ ಮಹಾದೇವಾದ್ಬ್ರಹ್ಮಾ ವಿಶ್ವನಿಯಾಮಕಾತ್ ।
ಸಮಸ್ತಲೋಕನಿರ್ಮಾಣಸಮುದ್ಯೋಗಪರೋಽಭವತ್ ॥೧೬॥

ಕೃತೋದ್ಯೋಗೋಽಪಿ ನಿರ್ಮಾಣೇ ಜಗತಾಂ ಶಂಕರಾಜ್ಞಯಾ ।
ಅಜ್ಞಾತೋಪಾಯಸಂಪತ್ತಿರಭವನ್ಮಾಯಯಾ ವೃತಃ ॥೧೭॥

---

ಗುಣಾಧಾರವೂ, ಅನಂತಮಹಿಮಾಕರವೂ, ಆನಂದಸ್ಫೂರ್ತಿಯುತವೂ ಆದ ಒಂದಾನೊಂದು ಸ್ವರೂಪವನ್ನು ಧರಿಸಿತು. ॥೮-೯-೧೦-೧೧॥ ಸಮಸ್ತಲೋಕಗಳ ನಿರ್ಮಾಣದಲ್ಲಿ ಸಮವಾಯಸ್ವರೂಪದಿಂದಿರುವ ಪರಶಿವಸಂಬಂಧಿನಿಯಾದ ವಿಮರ್ಶಶಕ್ತಿಯು ಪರಶಿವನ ಇಚ್ಛಾನುಸಾರವಾಗಿ, ಸಾಕ್ಷಾತ್ ಅವನ ಸ್ವರೂಪವನ್ನೇ ಅನುಕರಿಸುವಂಥದಾಯಿತು. ॥೧೨॥ ಭಗವಂತನೂ, ಸರ್ವಶಕ್ತಿಸಮನ್ವಿತನೂ, ಜಗನ್ನಾಯಕನೂ, ಸರ್ವಜ್ಞನೂ ಆದ ಆ ಪರಶಿವನು ಜಗತ್ತನ್ನು ನಿರ್ಮಿಸಲಿಚ್ಛೆಯುಳ್ಳವನಾಗಿ, "ವಿಶ್ವಾಧಿಕೋ ರುದ್ರೋ ಮಹರ್ಷಿಃ, ಹಿರಣ್ಯಗರ್ಭಂ ಜನಯಾಮಾಸ ಪೂರ್ವಂ" ಎಂಬ ಶ್ರುತಿವಾಕ್ಯಪ್ರಮಾಣಾನುಸಾರವಾಗಿ, ಆದಿಯಲ್ಲಿ ಚತುರ್ದಶಲೋಕಗಳನ್ನೂ ಹಾಗೂ ಆ ಲೋಕಗಳಲ್ಲಿರುವ ಸಮಸ್ತಪ್ರಾಣಿಗಳನ್ನೂ ನಿರ್ಮಿಸುವ ಚತುರ್ಮುಖಬ್ರಹ್ಮನನ್ನು ಸೃಷ್ಟಿಸಿದನು. ॥೧೪॥ ಸರ್ವಶಕ್ತಿಸಮನ್ವಿತನೂ, ವ್ಯಾಪಕನೂ, ಸರ್ವಜ್ಞನೂ ಆದ ಶಿವನು ತನ್ನ ಪ್ರಥಮಪುತ್ರನಾದ ಬ್ರಹ್ಮನಿಗೆ ಅನುಗ್ರಹಪೂರ್ವಕವಾಗಿ ಸಮಸ್ತವಿದ್ಯೆಗಳನ್ನೂ ಉಪದೇಶಿಸಿದನು. ॥೧೫॥ ವಿಶ್ವನಿಯಾಮಕನಾದ ಮಹಾದೇವನಿಂದ ಬ್ರಹ್ಮನು ಸೃಷ್ಟಿರಚನಾದಿವಿದ್ಯೆಯನ್ನು ಪಡೆದುಕೊಂಡು, ಸಮಸ್ತಲೋಕನಿರ್ಮಾಣೋದ್ಯೋಗದಲ್ಲಿ ನಿರತನಾದನು. ॥೧೬॥ ಶಂಕರನ ಆಜ್ಞೆಗನುಸಾರವಾಗಿ ಬ್ರಹ್ಮನು ಜಗನ್ನಿರ್ಮಾಣದಲ್ಲಿ ಉದ್ಯುಕ್ತನಾದರೂ, ಮಾಯಾಪರಿವೃತನಾದುದರಿಂದ ನಿರ್ಮಾ

ವಿಧಾತುಮಖಿಲಾನ್ ಲೋಕಾನುಪಾಯಂ ಪ್ರಾಪ್ತುಮಿಚ್ಛಯಾ ।
ಪುನಸ್ತಂ ಪ್ರಾರ್ಥಯಾಮಾಸ ದೇವದೇವಂ ತ್ರಿಲೋಚನಂ ॥೧೮॥

ನಮಸ್ತೇ ದೇವದೇವೇಶ ನಮಸ್ತೇ ಕರುಣಾಕರ ।
ಅಸ್ಮದಾದಿಜಗಜ್ಜಾಲನಿರ್ಮಾಣವಿಧಿಷು ಕ್ಷಮ ॥೧೯॥

ಉಪಾಯಂ ವದ ಮೇ ಶಂಭೋ ಜಗತ್ಸೃಷ್ಟೌ ಜಗತ್ಪತೇ ।
ಸರ್ವಜ್ಞಃ ಸರ್ವಶಕ್ತಿಸ್ತ್ವಂ ಸರ್ವಕರ್ತಾ ಸನಾತನಃ ॥೨೦॥

ಇತಿ ಸಂಪ್ರಾರ್ಥಿತಃ ಶಂಭುರ್ಬ್ರಹ್ಮಣಾ ವಿಶ್ವನಾಯಕಃ ।
ಉಪಾಯಮವದತ್ತಸ್ಮೈ ಲೋಕಸೃಷ್ಟಿಪ್ರವರ್ತಕಂ ॥೨೧॥

ಉಪಾಯಮೀಶ್ವರೇಣೋಕ್ತಂ ಲಬ್ಧ್ವಾಽಪಿ ಚತುರಾನನಃ ।
ನ ಸಮರ್ಥೋಽಭವತ್ಕರ್ತುಂ ನಾನಾರೂಪಮಿದಂ ಜಗತ್ ॥೨೨॥

ಪುನಸ್ತಂ ಪ್ರಾರ್ಥಯಾಮಾಸ ಬ್ರಹ್ಮಾ ವಿಹ್ವಲಮಾನಸಃ ।
ದೇವದೇವ ಮಹಾದೇವ ಜಗತ್ಪ್ರಥಮಕಾರಣ ॥೨೩॥

ನಮಸ್ತೇ ಸಚ್ಚಿದಾನಂದ ಸ್ವೇಚ್ಛಾವಿಗ್ರಹರಾಜಿತ ।
ಭವ ಶರ್ವ ಮಹೇಶಾನ ಸರ್ವಕಾರಣಕಾರಣ ॥೨೪॥

---

ಣೋಪಾಯವನ್ನು ತಿಳಿಯದವನಾದನು. ॥೧೭॥ ಆಗ ಬ್ರಹ್ಮನು ಲೋಕನಿರ್ಮಾಣೋಪಾಯವನ್ನು ತಿಳಿದುಕೊಳ್ಳುವ ಇಚ್ಛೆಯಿಂದ, ಪುನಃ ಶ್ರೀಶಂಕರನನ್ನು ಪ್ರಾರ್ಥಿಸಿದನು. ॥೧೮॥ ದೇವಾಧಿದೇವನೇ! ಕರುಣಾಸಮುದ್ರನೇ! ನನ್ನನ್ನು ಮೊದಲ್ಗೊಂಡು ಸಮಸ್ತಜಗತ್ತುಗಳ ನಿರ್ಮಾಣವಿಧಿಯಲ್ಲಿ ಸಮರ್ಥನೇ! ಜಗತ್ಪತಿಯೇ! ಶಂಭುವೇ। ನೀನು ಸರ್ವಜ್ಞನೂ, ಸರ್ವಶಕ್ತಿಸಮನ್ವಿತನೂ, ಸರ್ವಕರ್ತನೂ, ಸನಾತನನೂ ಆಗಿರುವುದರಿಂದ ನನಗೆ ಜಗನ್ನಿರ್ಮಾಣೋಪಾಯವನ್ನು ಬೋಧಿಸು; ಎಂದು ಬ್ರಹ್ಮನು ಶಿವನನ್ನು ನಾನಾರೀತಿಯಿಂದ ಸ್ತುತಿಸಲು, ಆಗ ಶಿವನು ಬ್ರಹ್ಮನಿಗೆ ಲೋಕನಿರ್ಮಾಣೋಪಾಯವನ್ನು ತಿಳುಹಿಸಿದನು. ॥೧೯-೨೦-೨೧॥ ಬ್ರಹ್ಮನು ಶಿವನು ಬೋಧಿಸಿದ ಉಪಾಯವನ್ನು ತಿಳಿದವನಾದರೂ, ನಾನಾರೂಪವಾದ ಜಗತ್ತನ್ನು ನಿರ್ಮಿಸಲು ಅಸಮರ್ಥನಾದನು. ॥೨೨॥ ಆಗ ಬ್ರಹ್ಮನು ವ್ಯಾಕುಲಮನಸ್ಸುಳ್ಳವನಾಗಿ ಪುನಃ ಶಿವನನ್ನು ಪ್ರಾರ್ಥಿಸಿದನು. ದೇವದೇವನೇ! ಮಹಾದೇವನೇ! ಜಗದಾದಿಕಾರಣನೇ! ಸಚ್ಚಿದಾನಂದಸ್ವರೂಪನೇ! ಸ್ವೇಚ್ಛಾವಿಗ್ರಹಧಾರಿಯೇ! ಭವನೇ! ಶರ್ವನೇ! ಮಹೇಶ್ವರನೇ! ಸರ್ವಕಾರಣಕಾರಣನೇ!

ಭವದುಕ್ತೋಽಪ್ಯುಪಾಯೋ ಮೇ ನ ಕಿಂಚಿದ್ ಜ್ಞಾಯತೇಽಧುನಾ ।
ಸೃಷ್ಟಿಂ ವಿಧೇಹಿ ಭಗವನ್ ಪ್ರಥಮಂ ಪರಮೇಶ್ವರ ॥
ಜ್ಞಾತೋಪಾಯಸ್ತತಃ ಕುರ್ಯಾಂ ಜಗತ್ಸೃಷ್ಟಿಮುಮಾಪತೇ ॥೨೫॥

ಇತ್ಯೇವಂ ಪ್ರಾರ್ಥಿತಃ ಶಂಭುರ್ಬ್ರಹ್ಮಣಾ ವಿಶ್ವಯೋನಿನಾ ।
ಸಸರ್ಜಾತ್ಮಸಮಪ್ರಖ್ಯಾನ್ ಸರ್ವಜ್ಞಾನ್ ಸರ್ವಶಕ್ತಿಕಾನ್ ॥೨೬॥

ಪ್ರಬೋಧಪರಮಾನಂದಪರಿವಾಹಿತಮಾನಸಾನ್ ।
ಪ್ರಮಥಾನ್ ವಿಶ್ವನಿರ್ಮಾಣಪ್ರಲಯಾದಿವಿಧಿಕ್ಷಮಾನ್ ॥೨೭॥

ಸೃಷ್ಟಪ್ರಮಥವರ್ಗೇಷು ವರ್ಣಾಶ್ರಮಪರಿಕ್ರಮಾನ್ ।
ಅಪ್ರಾಕೃತಸದಾಚಾರಾನುಪಾದಿಶದಥ ಪ್ರಭುಃ ॥೨೮॥

ಇತಿ ಶ್ರೀಸಿದ್ಧಾಂತಶಿಖಾಮಣೌ ಜಗತ್ಸೃಷ್ಟಿವಿಚಾರೋ ನಾಮ
ದ್ವಿತೀಯಪರಿಚ್ಛೇದಃ ಪರಿಸಮಾಪ್ತಃ.



---

ನೀನು ಉಪಾಯವನ್ನು ಹೇಳಿದರೂ ನನಗೆ ಚನ್ನಾಗಿ ತಿಳಿಯಲೊಲ್ಲದು ; ಆದುದರಿಂದ ಪರಮೇಶ್ವರನೇ ! ನೀನು ಮೊದಲು ಸೃಷ್ಟಿಯನ್ನು ಮಾಡು; ಆ ಉಪಾಯವನ್ನು ತಿಳಿದುಕೊಂಡು ಆ ಮೇಲೆ ನಾನು ಜಗತ್ಸೃಷ್ಟಿಯನ್ನು ಮಾಡುವೆನು ಎಂದು ಪ್ರಾರ್ಥಿಸಲು, ಆಗ ಶಂಕರನು ತನಗೆ ಸಮಾನವಾದ ಪ್ರತಿಭೆಯುಳ್ಳವರೂ, ಸರ್ವಜ್ಞರೂ, ಸರ್ವಶಕ್ತಿಸಮನ್ವಿತರೂ, ಜ್ಞಾನಾನಂದಮಯಮನಸ್ಕರೂ, ಜಗನ್ನಿರ್ಮಾಣಲಯಾದಿಕಾರ್ಯವಿಧಾನದಲ್ಲಿ ಸಮರ್ಥರೂ ಆದ ಶ್ರೀರೇಣುಕದಾರುಕಾದ್ಯನಂತಜನಪ್ರಮಥರನ್ನು ನಿರ್ಮಿಸಿದನು. ॥೨೩-೨೪-೨೫-೨೬-೨೭॥ ಶಿವನು ತನ್ನಿಂದ ಸೃಷ್ಟಿಸಲ್ಪಟ್ಟ ಪ್ರಮಥಸಮೂಹಕ್ಕೆ ಶಿವವರ್ಣಾಶ್ರಮಧರ್ಮಗಳ ಕ್ರಮವನ್ನೂ, ಅಪ್ರಾಕೃತಸದಾಚಾರಗಳನ್ನೂ ಉಪದೇಶಿಸಿದನು. ಬ್ರಹ್ಮನು ಶಿವನಿಂದ ಮಾಡಲ್ಪಟ್ಟ ಸೃಷ್ಟಿಯ ಉಪಾಯವನ್ನು ತಿಳಿದುಕೊಂಡು ಆ ಮೇಲೆ ಸೃಷ್ಟಿಯನ್ನು ಮಾಡಿದನೆಂದು ಭಾವವು. ॥೨೮॥

ಇಂತು ಶ್ರೀ ಸಿದ್ಧಾಂತಶಿಖಾಮಣಿಯಲ್ಲಿ ಜಗತ್ಸೃಷ್ಟಿವಿಚಾರಾತ್ಮಕವಾದ
ಎರಡನೆಯ ಪರಿಚ್ಛೇದವು ಪರಿಸಮಾಪ್ತವಾದುದು.



ಶ್ರೀಜಗದ್ಗುರುರೇಣುಕಾಚಾರ್ಯಃ ಪ್ರಸೀದತು.

# ತೃತೀಯಪರಿಚ್ಛೇದಃ



ಕದಾಚಿದಥ ಕೈಲಾಸೇ ಕಲಧೌತಶಿಲಾಮಯೇ ।
ಗಂಧರ್ವವಾಮನಯನಾಕ್ರೀಡಾಮೌಕ್ತಿಕದರ್ಪಣೇ ॥೧॥

ಮಂದಾರಬಕುಲಾಶೋಕಮಾಕಂದಪ್ರಾಯಭೂರುಹೇ ।
ಮಲ್ಲೀಮರಂದನಿಷ್ಯಂದಪಾನಪೀನಮಧುವ್ರತೇ ॥೨॥

ಕುಂಕುಮಸ್ತಬಕಾಮೋದಕಲಂಕಷಹರಿನ್ಮುಖೇ ।
ಕಲಕಂಠಕುಲಾಲಾಪಕಂದಲದ್ರಾಗಬಂಧುರೇ ॥೩॥

ಕಿನ್ನರೀಗೀತಮಾಧುರ್ಯಪರಿವಾಹಿತಗಹ್ವರೇ ।
ಸಾನಂದವರಯೋಗೀಂದ್ರಬೃಂದಾಲಂಕೃತಕಂದರೇ ॥೪॥

---

## ಮೂರನೆಯ ಪರಿಚ್ಛೇದವು



ಶ್ರೀರೇಣುಕದಾರುಕಾದಿಪ್ರಮಥಸಮೂಹವು ಅವತರಿಸಿದ ಮೇಲೆ ಶಿವನ ವಾಸಸ್ಥಾನವಾದ ಕೈಲಾಸಪರ್ವತದ ವರ್ಣನೆಯೂ, ಶಿವಶಕ್ತಿಯರ ವರ್ಣನೆಯೂ ವಿಶದವಾಗಿ ಮಾಡಲ್ಪಟ್ಟಿದೆ

### ಕೈಲಾಸಪರ್ವತದ ವರ್ಣನೆ.

**ವ್ಯಾಖ್ಯಾನ**—ರಜತಮಯಶಿಲಾವಿಶಿಷ್ಟವಾದುದೂ, ಗಂಧರ್ವಸ್ತ್ರೀಯರ ಕ್ರೀಡೆಗೆ ಮುತ್ತಿನಕನ್ನಡಿಯಂತಿರುವುದೂ ॥೧॥ ಮಂದಾರ - ಬಕುಲ - ಅಶೋಕ - ಮಾವು ಮೊದಲಾದ ವೃಕ್ಷವಿಶೇಷಗಳಿಂದ ನಿಬಿಡವಾದುದೂ, ಮಲ್ಲಿಕಾಕುಸುಮಗಳಿಂದ ಹೊರಡುತ್ತಿರುವ ಮಕರಂದದ ಪಾನದಿಂದ ಪರಿಪುಷ್ಟಗಳಾದ ಭೃಂಗಗಳುಳ್ಳುದೂ ॥೨॥ ಕೆಂಪುಹೂವುಗಳ ಗುಚ್ಛದ ಸುವಾಸನೆಯಿಂದ ತುಂಬಿದ ಸಮಸ್ತದಿಕ್ಪ್ರದೇಶವುಳ್ಳುದೂ, ಕೋಗಿಲೆಗಳ ಸಮೂಹದ ಮಧುರಧ್ವನಿಯಿಂದುತ್ಪನ್ನವಾದ ಪಂಚಮಸ್ವರದಿಂದ ಮನೋಹರವಾದುದೂ ॥೩॥ ಕಿನ್ನರಸ್ತ್ರೀಯರ ಗಾನದ ಮಾಧುರ್ಯದಿಂದ ವ್ಯಾಪ್ತವಾದ ಗಹ್ವರ (ಗವಿ) ಗಳುಳ್ಳುದೂ, ಸಾನಂದಾದಿಯೋಗೀಂದ್ರರ ಸಮುದಾಯದಿಂದ ಅಲಂಕೃತವಾದ ಗುಹೆಗಳುಳ್ಳುದೂ ॥೪॥ ಸುವರ್ಣಕಮಲಗಳ

ಹೇಮಾರವಿಂದಕಲಿಕಾಸುಗಂಧಿರಸಮಾನಸೇ ।
ಶಾತಕುಂಭಮಯೋತ್ತುಂಗಶತಸ್ತಂಭವಿರಾಜಿತೇ ॥೫॥
ಮಾಣಿಕ್ಯದೀಪಕಲಿಕಾಮರೀಚಿದ್ಯೋತಿತಾಂತರೇ ।
ದ್ವಾರತೋರಣಸಂರೂಢಶಂಖಪದ್ಮನಿಧಿದ್ವಯೇ ॥೬॥
ಮುಕ್ತಾತಾರಕಿತೋದಾರವಿತಾನಾಂಬರಮಂಡಿತೇ ।
ಸ್ಪರ್ಶಲಕ್ಷಿತವೈಡೂರ್ಯಮಯಭಿತ್ತಿಪರಂಪರೇ ॥೭॥
ಸಂಚರತ್ಪ್ರಮಥಶ್ರೇಣೀಪದವಾಚಾಲನೂಪುರೇ ।
ಪ್ರವಾಲವಲಭೀಶೃಂಗಶೃಂಗಾರಮಣಿಮಂಟಪೇ ॥೮॥
ವಂದಾರುದೇವಮುಕುಟಮಂದಾರರಸವಾಸಿತಂ ।
ರತ್ನಸಿಂಹಾಸನಂ ದಿವ್ಯಮಧ್ಯಸ್ತಂ ಪರಮೇಶ್ವರಂ ॥೯॥
ತಮಾಸ್ಥಾನಗತಂ ದೇವಂ ಸರ್ವಲೋಕಮಹೇಶ್ವರಂ ।
ತ್ರ್ಯಂಬಕಮಲಾರಣ್ಯವಿಹಾರಕಲಹಂಸಕಂ ॥೧೦॥

---

ಸುಗಂಧರಸದಿಂದ ತುಂಬಿದ ಮಾನಸಸರೋವರವುಳ್ಳುದೂ, ದೊಡ್ಡ ದೊಡ್ಡ ನೂರಾರು ಸುವರ್ಣಸ್ತಂಭಗಳಿಂದ ವಿರಾಜಿಸುತ್ತಿರುವುದೂ ॥೫॥ ರತ್ನದೀಪಶಿಖೆಯಿಂದ ಹೊರ ಹೊರಟ ಕಿರಣಗಳಿಂದ ಪ್ರಕಾಶಮಾನವಾದ ಅಂತಃಪುರವುಳ್ಳುದೂ, ಮಹಾದ್ವಾರ ಸ್ತಂಭಗಳ ಉಭಯಪ್ರದೇಶದಲ್ಲಿ ಶಂಖಪದ್ಮಗಳೆಂಬ ನಿಧಿಗಳಿಂದ ಯುಕ್ತವಾದುದೂ ॥೬॥ ನಕ್ಷತ್ರದಂತಿರುವ ಮುತ್ತುಗಳಿಂದ ವಿರಚಿತವಾದ ವಿಶಾಲವಿತಾನಾಂಬರ (ಛತ್ತು) (ಮೇಲ್ಕಟ್ಟಿನ ವಸ್ತ್ರ) ದಿಂದ ಅಲಂಕೃತವಾದುದೂ, ಸ್ಪರ್ಶದಿಂದಲೇ ಕಂಡುಹಿಡಿಯ ಬೇಕಾದ ವೈಡೂರ್ಯಮಣಿಮಯವಾದ ಗೋಡೆಗಳ ಸಾಲುಗಳಿಂದ ಕೂಡಿದುದೂ ॥೭॥ ಅಲ್ಲಲ್ಲಿ ಸಂಚರಿಸುತ್ತಿರುವ ಪ್ರಮಥಸಮುದಾಯದ ಚರಣಗಳಲ್ಲಿರುವ ಗೆಜ್ಜೆಯಸರ ಗಳಿಂದ ಶಬ್ದಾಯಮಾನವಾದುದೂ, ಹವಳಗಳಿಂದ ವಿರಚಿತವಾದ ಪ್ರಾಕಾರಶೃಂಗ ಗಳಿಂದ ಕೂಡಿದ ಕ್ರೀಡಾಮಂಟಪವುಳ್ಳುದೂ ಆದ ಕೈಲಾಸಪರ್ವತವು ಶೋಭಿಸು ತ್ತಿರುವುದು. ॥೮॥

## ಶಿವವರ್ಣನೆ.

ಇಂತಹ ಮನೋಹರವಾದ ಕೈಲಾಸಪರ್ವತದಲ್ಲಿ ನಮಸ್ಕರಿಸುತ್ತಿರುವ ಸಮಸ್ತದೇವತೆಗಳ ಕಿರೀಟದಲ್ಲಿ ವಿರಾಜಿತಗಳಾದ ಪಾರಿಜಾತಪುಷ್ಪಗಳ ರಸದಿಂದ ಸುವಾಸಿತವಾದ ದಿವ್ಯರತ್ನಸಿಂಹಾಸನವನ್ನಲಂಕರಿಸಿರುವವನೂ, ದೇವಾಧಿದೇವನೂ,

ಉದಾರಗುಣಮೋಂಕಾರಶುಕ್ತಿಕಾಪುಟಮೌಕ್ತಿಕಂ ।
ಸರ್ವಮಂಗಲಸೌಭಾಗ್ಯಸಮುದಾಯನಿಕೇತನಂ ॥೧೧॥
ಸಂಸಾರವಿಷಮೂರ್ಚ್ಛಾಲಜೀವಸಂಜೀವನೌಷಧಂ ।
ನಿತ್ಯಪ್ರಕಾಶನೈರ್ಮಲ್ಯಂ ಕೈವಲ್ಯಸುರಪಾದಪಂ ॥೧೨॥
ಅನಂತಪರಮಾನಂದಮಕರಂದಮಧುವ್ರತಂ ।
ಆತ್ಮಶಕ್ತಿಲತಾಪುಷ್ಯತ್ರಿಲೋಕೀಪುಷ್ಪಕೋರಕಂ ॥೧೩॥
ಬ್ರಹ್ಮಾಂಡಕುಂಡಿಕಾಷಂಡಪಿಂಡೀಕರಣಪಂಡಿತಂ ।
ಸಮಸ್ತದೇವತಾಚಕ್ರಚಕ್ರವರ್ತಿಪದೇ ಸ್ಥಿತಂ ॥೧೪॥
ಚಂದ್ರಬಿಂಬಾಯುತಚ್ಛಾಯಾಪಾಯಾದದ್ಯುತಿವಿಗ್ರಹಂ ।
ಮಾಣಿಕ್ಯಮುಕುಟಜ್ಯೋತಿರ್ಮಂಜರೀಪಿಂಜರಾಂಬರಂ ॥೧೫॥
ಚೂಡಾಲಂ ಸೋಮಕಲಯಾ ಸುಕುಮಾರಬಿಸಾಭಯಾ ।
ಕಲ್ಯಾಣಪುಷ್ಪಕಲಿಕಾಕರ್ಣಪೂರಮನೋಹರಂ ॥೧೬॥

---

ಸರ್ವಲೋಕಾಧಿಪತಿಯೂ, ವೇದಾಂತರೂಪವಾದ ಕಮಲವನದ ವಿಹಾರದಲ್ಲಿ ರಾಜಹಂಸಸ್ವರೂಪನೂ ॥೧೦॥ ಉದಾರಗುಣಯುತನೂ, ಓಂಕಾರವೆಂಬ ಶುಕ್ತಿಕಾ ಪುಟಕ್ಕೆ ಮುಕ್ತಾ (ಮುತ್ತು) ಸ್ವರೂಪನೂ, ಸರ್ವಮಂಗಲಗಳಿಗೂ ಸಮಸ್ತ ಸೌಭಾಗ್ಯಗಳಿಗೂ ಮಂದಿರಸ್ವರೂಪನೂ ॥೧೧॥ ಸಂಸಾರರೂಪವಿಷದಿಂದ ಮೂರ್ಛಿತ ವಾದ ಜೀವಕೋಟಿಗೆ ಸಂಜೀವನೌಷಧಸ್ವರೂಪನೂ, ಸ್ವಪ್ರಕಾಶದಿಂದ ನಿರ್ಮಲನೂ, ಮೋಕ್ಷಕಲ್ಪವೃಕ್ಷನೂ ॥೧೨॥ ಅಪಾರವಾದ ಪರಮಾನಂದವೆಂಬ ಮಕರಂದವನ್ನು ಪಾನಮಾಡುವುದರಲ್ಲಿ ಭೃಂಗಸ್ವರೂಪನೂ, ತನ್ನಲ್ಲಿ ನಿತ್ಯಸಂಬಂಧದಿಂದಿರುವ ಶಕ್ತಿ ರೂಪಲತೆಯಿಂದ ತ್ರಿಲೋಕಗಳೆಂಬ ಪುಷ್ಪಕೋರಕ (ಮೊಗ್ಗೆ) ಗಳನ್ನು ರಕ್ಷಿಸು ವವನೂ ॥೧೩॥ ಅನಂತಬ್ರಹ್ಮಾಂಡಗಳೆಂಬ ಪಾತ್ರೆಗಳ ಸಮೂಹವನ್ನು ಒಂದು ಗೂಡಿಸುವುದರಲ್ಲಿ ಕುಶಲನೂ, ಸಮಸ್ತದೇವತಾಸಮೂಹಕ್ಕೆ ಸಾರ್ವಭೌಮ ನಾಗಿರುವವನೂ ॥೧೪॥ ಹತ್ತುಸಾವಿರಚಂದ್ರರ ಬಿಂಬಚ್ಛಾಯೆಗೆ ಸಮಾನವಾದ ತೇಜೋಮಯಶರೀರವುಳ್ಳವನೂ, ಸಮಸ್ತದೇವತೆಗಳ ರತ್ನಮಯಕಿರೀಟದಿಂದ ಹೊರ ಹೊರಟ ಕಿರಣಗಳಿಂದ ವಿಚಿತ್ರಿತವಾದ ವಸ್ತ್ರವುಳ್ಳವನೂ ॥೧೫॥ ಕೋಮಲವಾದ ಕಮಲತಂತುವಿನಂತೆ ಪ್ರಕಾಶಿಸುತ್ತಿರುವ ಚಂದ್ರಕಲೆಯೇ ಶಿರೋಭೂಷಣವಾಗುಳ್ಳ ವನೂ, ಮಂಗಲರೂಪಕುಸುಮಕೋರಕ (ಹೂವಿನಮೊಗ್ಗೆ) ವೆಂಬ ಕರ್ಣಾಭರಣದಿಂದ

ಮುಕ್ತಾವಲಯಸಂಬದ್ಧರುಂಡಮಾಲಾವಿರಾಜಿತಂ ।
ಪರ್ಯಾಪ್ತಚಂದ್ರಸೌಂದರ್ಯಪರಿಪಂಥಿಮುಖಶ್ರಿಯಂ ॥೧೭॥

ಪ್ರಾತಃಸಂಫುಲ್ಲಕಮಲಪ್ರತೀಕಾಶತ್ರಿಲೋಚನಂ ।
ಮಂದಸ್ಮಿತಮಿತಾಲಾಪಮಧುರಾಧರಪಲ್ಲವಂ ॥೧೮॥

ಗಂಡಮಂಡಲಪರ್ಯಂತಕ್ರೀಡನ್ಮಕರಕುಂಡಲಂ ।
ಕಾಲಿಮ್ನಾ ಕಾಲಕೂಟಸ್ಯ ಕಂಠನಾಲೇ ಕಲಂಕಿತಂ ॥೧೯॥

ಮಣಿಕಂಕಣಕೇಯೂರಮರೀಚಿಕರಪಲ್ಲವೈಃ ।
ಚತುರ್ಭಿಃ ಸಂವಿರಾಜಂತಂ ಬಾಹುಮಂದಾರಶಾಖಿಭಿಃ ॥೨೦॥

ಗೌರೀಪಯೋಧರಾಶ್ಲೇಷಕೃತಾರ್ಥಭುಜಮಧ್ಯಮಂ ।
ಸುವರ್ಣಬ್ರಹ್ಮಸೂತ್ರಾಂಕಂ ಸೂಕ್ಷ್ಮಕೌಶೇಯವಾಸಸಂ ॥೨೧॥

ನಾಭಿಸ್ಥಾನಾವಲಂಬಿನ್ಯಾ ನವಮೌಕ್ತಿಕಮಾಲಯಾ ।
ಗಂಗಯೇವ ಕೃತಾಶ್ಲೇಷಂ ಮೌಲಿಭಾಗಾವತೀರ್ಣಯಾ ॥೨೨॥

---

ಮನೋಹರನಾದವನೂ ॥೧೬॥ ಮುತ್ತಿನ ಸರಗಳಿಂದ ಯುಕ್ತವಾದ ರುಂಡಮಾಲೆಯಿಂದ ವಿರಾಜಿಸುವವನೂ, ಪೂರ್ಣಚಂದ್ರನ ಸೌಂದರ್ಯವನ್ನು ತಿರಸ್ಕರಿಸುತ್ತಿರುವ ಮುಖಕಾಂತಿಯುಳ್ಳವನೂ ॥೧೭॥ ಪ್ರಾತಃಕಾಲದಲ್ಲಿ ಅರಳಿದ ಕಮಲಗಳಿಗೆ ಸಮಾನವಾದ ಮೂರು ನೇತ್ರಗಳುಳ್ಳವನೂ, ಮುಗುಳ್ನಗೆಯಿಂದಲೂ ಮಿತಭಾಷಣದಿಂದಲೂ ಯುಕ್ತವಾದ ಸುಂದರಾಧರವುಳ್ಳವನೂ ॥೧೮॥ ಗಲ್ಲದವರೆಗೆ ಜೋಲಾಡುತ್ತಿರುವ ಮೀನಾಕಾರದಂತಿರುವ ಕರ್ಣಕುಂಡಲಗಳುಳ್ಳವನೂ, ಕಾಲಕೂಟವಿಷದ ಕಪ್ಪು ಬಣ್ಣದಿಂದ ಕಲಂಕಿತವಾದ ಕಂಠವುಳ್ಳವನೂ ॥೧೯॥ ರತ್ನಕಂಕಣ ಮತ್ತು ರತ್ನಮಯಭುಜಕಿರೀಟಗಳ ಕಾಂತಿಯಿಂದ ಕೂಡಿದ ಕರಪಲ್ಲವಗಳುಳ್ಳ ಮಂದಾರವೃಕ್ಷ ಶಾಖೆಗಳಿಗೆ ಸಮಾನವಾದ ನಾಲ್ಕು ಹಸ್ತಗಳಿಂದ ಪರಿಶೋಭಿಸುತ್ತಿರುವವನೂ ॥೨೦॥ ಪಾರ್ವತೀದೇವಿಯ ಕುಚಾಲಿಂಗನದಿಂದ ಕೃತಾರ್ಥವಾದ ಭುಜಗಳುಳ್ಳವನೂ, ಸುವರ್ಣಮಯಯಜ್ಞೋಪವೀತದಿಂದ ಯುಕ್ತನಾದವನೂ, ಅತ್ಯಂತಸೂಕ್ಷ್ಮವಾದ ರೇಷ್ಮೆಯ ವಸ್ತ್ರವನ್ನು ಧರಿಸಿರುವವನೂ ॥೨೧॥ ನಾಭಿಸ್ಥಾನದವರೆಗೆ ಜೋಲಾಡುತ್ತಿರುವುದರಿಂದ ಮಸ್ತಕಪ್ರದೇಶದಿಂದ ಕೆಳಕ್ಕೆ ಇಳಿದುಬಂದಿರುವ ಗಂಗೆಯೋ ಎಂಬಂತೆ ತೋರುತ್ತಿರುವ ನೂತನವಾದ ಮುತ್ತಿನಸರದಿಂದ ಆಲಿಂಗಿತನಾಗಿರುವವನೂ ॥೨೨॥

ಪದೇನ ಮಣಿಮಂಜೀರಪ್ರಭಾಪಲ್ಲವಿತಶ್ರಿಯಾ ।
ಚಂದ್ರವತ್ ಸ್ಫಾಟಿಕಂ ಪೀಠಂ ಸಮಾವೃತ್ಯ ಸ್ಥಿತಂ ಪುರಃ ॥೨೩॥

ವಾಮಪಾರ್ಶ್ವನಿವಾಸಿನ್ಯಾ ಮಂಗಲಪ್ರಿಯವೇಷಯಾ ।
ಸಮಸ್ತಲೋಕನಿರ್ಮಾಣಸಮವಾಯಸ್ವರೂಪಯಾ ॥೨೪॥

ಇಚ್ಛಾಜ್ಞಾನಕ್ರಿಯಾರೂಪಬಹುಶಕ್ತಿವಿಲಾಸಯಾ ।
ವಿದ್ಯಾತತ್ತ್ವಪ್ರಕಾಶಿನ್ಯಾ ವಿನಾಭಾವವಿಹೀನಯಾ ॥೨೫॥

ಸಂಸಾರವಿಷಕಾಂತಾರದಾಹದಾವಾಗ್ನಿಲೇಖಯಾ ।
ಧಮ್ಮಿಲ್ಲಮಲ್ಲಿಕಾಮೋದಝುಂಕುರ್ವದ್ಭೃಂಗಮಾಲಯಾ ॥೨೬॥

ಸಂಪೂರ್ಣಚಂದ್ರಸೌಭಾಗ್ಯಸಂವಾದಿಮುಖಪದ್ಮಯಾ ।
ನಾಸಾಮೌಕ್ತಿಕಲಾವಣ್ಯನಾಸೀರಸ್ಮಿತಶೋಭಯಾ ॥೨೭॥

ಮಣಿತಾಟಂಕರಂಗಾಂತರ್ವಲಿತಾಪಾಂಗಲೀಲಯಾ ।
ನೇತ್ರದ್ವಿತಯಸೌಂದರ್ಯನಿಂದಿತೇಂದೀವರತ್ವಿಷಾ ॥೨೮॥

---

ರತ್ನನೂಪುರಗಳ ಪ್ರಭೆಯಿಂದ ಪಲ್ಲವಾಕಾರಶೋಭೆಯನ್ನು ಧರಿಸಿದ ಚರಣಗಳಿಂದ, ಚಂದ್ರನಂತೆ ಶುಭ್ರವಾಗಿರುವ ಸ್ಫಟಿಕಪೀಠವನ್ನು ಅಲಂಕರಿಸಿರುವವನೂ ಆದ ಪರಮೇಶ್ವರನು ಪರಿಶೋಭಿಸುತ್ತಿರುವನು. ॥೨೩॥

## ಶಕ್ತಿವರ್ಣನೆ.

ಪರಮೇಶ್ವರನ ವಾಮಭಾಗದಲ್ಲಿ ವಾಸಿಸುತ್ತಿರುವವಳೂ, ಮಂಗಲವೇಷವುಳ್ಳವಳೂ, ಸಮಸ್ತಲೋಕಗಳ ನಿರ್ಮಾಣದಲ್ಲಿ ಸಮವಾಯಸ್ವರೂಪದಿಂದಿರುವವಳೂ ॥೨೪॥ ಇಚ್ಛಾ-ಜ್ಞಾನ-ಕ್ರಿಯಾರೂಪವಾದ ಅನೇಕವಿಧಶಕ್ತಿಗಳಿಂದ ವಿರಾಜಿಸುವವಳೂ, ಆತ್ಮವಿದ್ಯಾಸ್ವರೂಪವನ್ನು ಪ್ರಕಾಶಪಡಿಸುವವಳೂ, ಶಿವನೊಡನೆ ಅವಿನಾಭಾವ (ನಿತ್ಯ) ಸಂಬಂಧದಿಂದಿರುವವಳೂ ॥೨೫॥ ಸಂಸಾರವೆಂಬ ವಿಷಾರಣ್ಯವನ್ನು ದಹನಮಾಡುವುದರಲ್ಲಿ ದಾವಾಗ್ನಿಸ್ವರೂಪಳೂ, ತುರುಬಿನಲ್ಲಿ ಧರಿಸಿದ ಮಲ್ಲಿಗೆಹೂವುಗಳ ಸುಗಂಧದಿಂದ ಝೇಂಕರಿಸುತ್ತಿರುವ ಭೃಂಗಪಂಕ್ತಿಯುಳ್ಳವಳೂ ॥೨೬॥ ಪೂರ್ಣಚಂದ್ರಸೌಭಾಗ್ಯವನ್ನು ಅನುಕರಿಸುತ್ತಿರುವ ಮುಖಕಮಲವುಳ್ಳವಳೂ, ಮುತ್ತಿನ ನತ್ತಿನ ಲಾವಣ್ಯವಿಶೇಷದಿಂದುಂಟಾದ ಮಂದಸ್ಮಿತಶೋಭೆಯಿಂದ ಶೋಭಿಸುತ್ತಿರುವವಳೂ ॥೨೭॥ ರತ್ನದ ವಾಲೆಗಳೆಂಬ ರಂಗಮಂಟಪದ ಮಧ್ಯದಲ್ಲಿ ಚಲ್ಲಿದ ಕಟಾಕ್ಷವುಳ್ಳವಳೂ,

ಕುಸುಮಾಯುಧಕೋದಂಡಕುಟಿಲಭ್ರೂವಿಲಾಸಯಾ ।
ಬಂಧೂಕಕುಸುಮಚ್ಛಾಯಾಬಂಧುಭೂತಾಧರಶ್ರಿಯಾ ॥೨೯॥
ಕಂಠನಾಲಜಿತಾನಂಗಕಂಬುಬಿಬ್ಬೋಕಸಂಪದಾ ।
ಬಾಹುದ್ವಿತಯಸೌಭಾಗ್ಯವಂಚಿತೋತ್ಪಲಮಾಲಯಾ ॥೩೦॥
ಸ್ಥಿರಯೌವನಲಾವಣ್ಯಶೃಂಗಾರಿತಶರೀರಯಾ ।
ಅತ್ಯಂತಕಠಿನೋತ್ತುಂಗಪೀವರಸ್ತನಭಾರಯಾ ॥೩೧॥
ಮೃಣಾಲವಲ್ಲರೀತಂತುಬಂಧುಭೂತಾವಲಗ್ನಯಾ ।
ಶೃಂಗಾರತಟಿನೀತುಂಗಪುಲಿನಶ್ರೋಣಿಭಾರಯಾ ॥೩೨॥
ಕುಸುಂಭಕುಸುಮಚ್ಛಾಯಾಕೋಮಲಾಂಬರಶೋಭಯಾ ।
ಶೃಂಗಾರೋದ್ಯಾನಸಂರಂಭರಂಭಾಸ್ತಂಭೋರುಕಾಂಡಯಾ ॥೩೩॥
ಚೂತಪ್ರವಾಲಸುಷಮಾಸುಕುಮಾರಪದಾಬ್ಜಯಾ ।
ಸ್ಥಿರಮಂಗಲಶೃಂಗಾರಭೂಷಣಾಲಂಕೃತಾಂಗಯಾ ॥೩೪॥

---

ನೇತ್ರಗಳ ಸೌಂದರ್ಯದಿಂದ ಕನ್ನೈದಿಲೆಗಳ ಕಾಂತಿಯನ್ನು ತಿರಸ್ಕರಿಸುತ್ತಿರುವವಳೂ ॥೨೮॥ ಮನ್ಮಥನ ಧನುಸ್ಸಿನಂತೆ ಮಣಿದಿರುವ ಹುಬ್ಬುಗಳಿಂದ ಶೋಭಿಸುವವಳೂ, ಬಂಧೂಕಪುಷ್ಪದ ಶೋಭೆಯನ್ನನುಕರಿಸುತ್ತಿರುವ ಅಧರಶೋಭೆಯುಳ್ಳವಳೂ ॥೨೯॥ ಮನ್ಮಥನ ಜಯಶಂಖದ ಧ್ವನಿಯನ್ನು ತನ್ನ ಕಂಠದ ಮಧುರಧ್ವನಿಯಿಂದ ಜಯಿಸಿದವಳೂ, ಬಾಹುಗಳ ಸೌಭಾಗ್ಯದಿಂದ ಕನ್ನೈದಿಲೆಯ ಮಾಲಿಕೆಯನ್ನು ತಿರಸ್ಕರಿಸುತ್ತಿರುವವಳೂ ॥೩೦॥ ನಿತ್ಯವಾದ ತಾರುಣ್ಯದ ಲಾವಣ್ಯದಿಂದ ಪರಿಶೋಭಿಸುತ್ತಿರುವ ಶರೀರವುಳ್ಳವಳೂ, ಅತ್ಯಂತಕಠಿನವಾದ ಉನ್ನತಕುಚಗಳ ಭಾರದಿಂದ ಕೂಡಿರುವವಳೂ ॥೩೧॥ ಕಮಲದಬಳ್ಳಿಯ ತಂತುವಿಗೆ ಸಮಾನವಾದ ಮಧ್ಯ (ನಡು) ವುಳ್ಳವಳೂ, ಶೃಂಗಾರರೂಪನದಿಗೆ ಉನ್ನತವಾದ ಉಸುಕಿನ ದಿನ್ನೆಗಳಂತಿರುವ ಜಘನವುಳ್ಳವಳೂ ॥೩೨॥ ಕುಸುಬೆಯಹೂವಿನ ಶೋಭೆಯಂತಿರುವ ಮನೋಹರವಾದ ವಸ್ತ್ರದಿಂದ ಶೋಭಿಸುವವಳೂ, ಶೃಂಗಾರವೆಂಬ ಉದ್ಯಾನದ ಶೋಭೆಗೆ ರಂಭಾಸ್ತಂಭದಂತಿರುವ ತೊಡೆಗಳುಳ್ಳವಳೂ ॥೩೩॥ ಕೋಮಲವಾದ ಮಾವಿನ ಚಿಗುರಿನ ಬಣ್ಣದಂತೆ ಮನೋಹರವಾದ ಪಾದಕಮಲಗಳುಳ್ಳವಳೂ, ನಿತ್ಯಮಂಗಲಾತ್ಮಕಗಳಾದ ಅಲಂಕಾರಗಳಿಂದ ಅಲಂಕೃತವಾದ ಶರೀರವುಳ್ಳವಳೂ ॥೩೪॥ ಮುತ್ತಿನ

ಹಾರನೂಪುರಕೇಯೂರಚಮತ್ಕೃತಶರೀರಯಾ ।
ಚಕ್ಷುರಾನಂದಲತಯಾ ಸೌಭಾಗ್ಯಕುಲವಿದ್ಯಯಾ ॥೩೫॥
ಉಮಯಾ ಸಮಮಾಸೀನಂ ಲೋಕಜಾಲಕುಟುಂಬಯಾ ।
ಅಪೂರ್ವರೂಪಮಭಜನ್ ಪರಿವಾರಾಃ ಸಮಂತತಃ ॥೩೬॥
ಪುಂಡರೀಕಾಕೃತಿಸ್ವಚ್ಛಂ ಪೂರ್ಣಚಂದ್ರಸಹೋದರಂ ।
ದಧೌ ತಸ್ಯ ಮಹಾಲಕ್ಷ್ಮೀಃ ಸಿತಮಾತಪವಾರಣಂ ॥೩೭॥
ತಂತ್ರೀರ್ಝುಂಕಾರಶಾಲಿನ್ಯಾ ಸಂಗೀತಾಮೃತವಿದ್ಯಯಾ ।
ಉಪತಸ್ಥೇ ಮಹಾದೇವಮುಪಾಂತೇ ಚ ಸರಸ್ವತೀ ॥೩೮॥
ಝುಣತ್ಕಂಕಣಜಾತೇನ ಹಸ್ತೇನೋಪನಿಷದ್ವಧೂಃ ।
ಓಂಕಾರತಾಲವೃಂತೇನ ವೀಜಯಾಮಾಸ ಶಂಕರಂ ॥೩೯॥
ಚಲಚ್ಚಾಮರಿಕಾಹಸ್ತಾ ಝುಂಕುರ್ವನ್ಮಣಿಕಂಕಣಾಃ ।
ಆಸೇವಂತ ತಮೀಶಾನಮಭಿತೋ ದಿವ್ಯಕನ್ಯಕಾಃ ॥೪೦॥

---

ಹಾರ-ಕಾಲಸರಪಣಿ-ವಂಕಿಗಳಿಂದ ಪರಿಶೋಭಿಸುತ್ತಿರುವ ಶರೀರವುಳ್ಳವಳೂ, ನೋಡುವವರ ಕಣ್ಣುಗಳಿಗೆ ಆನಂದಲತೆಯಂತಿರುವವಳೂ, ಸೌಭಾಗ್ಯಕುಲವಿದ್ಯಾಸ್ವರೂಪಳೂ ॥೩೫॥ ಸಮಸ್ತಲೋಕಗಳೇ ಕುಟುಂಬವಾಗುಳ್ಳವಳೂ ಆದ ಉಮಾದೇವಿಯೊಡನೆ ದಿವ್ಯಸಿಂಹಾಸನವನ್ನಲಂಕರಿಸಿರುವವನೂ, ಅಸಾಧಾರಣರೂಪದಿಂದ ಕೂಡಿರುವವನೂ ಆದ ಪರಮೇಶ್ವರನನ್ನು ಮೂವತ್ತುಮೂರುಕೋಟಿ ದೇವತೆಗಳೂ ಸುತ್ತಲೂನಿಂತು ಸ್ತುತಿಸಿದರು. ॥೩೬॥

## ದೇವತಾಸಮೂಹಕೃತಶಿವಸೇವಾವರ್ಣನೆ.

ಮಹಾಲಕ್ಷ್ಮೀದೇವಿಯು ಪರಮೇಶ್ವರನಿಗೆ ಶ್ವೇತಕಮಲದಂತೆ ಶುಭ್ರವೂ, ಪೂರ್ಣಚಂದ್ರನಂತೆ ಶೋಭಿಸುತ್ತಿರುವುದೂ ಆದ ಶ್ವೇತಚ್ಛತ್ರವನ್ನು ಹಿಡಿದಿದ್ದಳು. ॥೩೭॥ ಸರಸ್ವತೀದೇವಿಯು ಪರಮೇಶ್ವರನ ಸಮೀಪದಲ್ಲಿ ನಿಂತು ತನ್ನ ವೀಣೆಯ ಮಂಜುಳಧ್ವನಿಯಿಂದ ಶೋಭಿತವಾದ ಅಮೃತಸದೃಶಸಂಗೀತವಿದ್ಯೆಯಿಂದ ಸೇವಿಸುತ್ತಿದ್ದಳು. ॥೩೮॥ ಉಪನಿಷದ್ರೂಪಸ್ತ್ರೀಯಳು ಶಬ್ದಾಯಮಾನಗಳಾದ ಬಳೆಗಳಿಂದ ಕೂಡಿದ ಹಸ್ತದಿಂದ ಓಂಕಾರರೂಪವ್ಯಜನದಿಂದ ಬೀಸುತ್ತಿದ್ದಳು. ॥೩೯॥ ಶಬ್ದಾಯಮಾನಗಳಾದ ರತ್ನಮಯಕಂಕಣಗಳುಳ್ಳವರೂ, ಅಲ್ಲಾಡುತ್ತಿರುವ ಚಾಮರಗಳಿಂದ ಕೂಡಿದ ಹಸ್ತಗಳುಳ್ಳವರೂ ಆದ ದೇವಕನ್ಯೆಯರು ಪರಮೇಶ್ವರನ ಸುತ್ತಲೂ ನಿಂತು

ಚಾಮರಾಣಾಂ ವಿಲೋಲಾನಾಂ ಮಧ್ಯೇ ತನ್ಮುಖಮಂಡಲಂ ।
ರರಾಜ ರಾಜಹಂಸಾನಾಂ ಭ್ರಮತಾಮಿವ ಪಂಕಜಂ ॥೪೧॥

ಮಂತ್ರೇಣ ತಮಸೇವಂತ ವೇದಾಃ ಸಾಂಗವಿಭೂತಯಃ ।
ಭಕ್ತ್ಯಾ ಚೂಡಾಮಣಿಂ ಕಾಂತಂ ವಹಂತ ಇವ ಮೌಲಿಭಿಃ ॥೪೨॥

ತದೀಯಾಯುಧಧಾರಿಣ್ಯಸ್ತತ್ಸಮಾನವಿಭೂಷಣಾಃ ।
ಅಂಗಭೂತಾಃ ಸ್ತ್ರಿಯಃ ಕಾಶ್ಚಿದಾಸೇವಂತ ತಮೀಶ್ವರಂ ॥೪೩॥

ಆಪ್ತಾಧಿಕಾರಿಣಃ ಕೇಚಿದನಂತಪ್ರಮುಖಾ ಅಪಿ ।
ಅಷ್ಟೌ ವಿದ್ಯೇಶ್ವರಾ ದೇವಮಭಜಂತ ಸಮಂತತಃ ॥೪೪॥

ತತೋ ನಂದೀ ಮಹಾಕಾಲಶ್ಚಂಡೋ ಭೃಂಗಿರಿಟಿಸ್ತತಃ ।
ಘಂಟಾಕರ್ಣಃ ಪುಷ್ಪದಂತಃ ಕಪಾಲೀ ವೀರಭದ್ರಕಃ ॥೪೫॥

ಏವಮಾದ್ಯಾ ಮಹಾಭಾಗಾ ಮಹಾಬಲಪರಾಕ್ರಮಾಃ ।
ನಿರಂಕುಶಮಹಾಸತ್ತ್ವಾ ಭೇಜಿರೇ ತಂ ಮಹೇಶ್ವರಂ ॥೪೬॥

---

ಸೇವಿಸುತ್ತಿದ್ದರು. ॥೪೦॥ ಸಂಚರಿಸುತ್ತಿರುವ ರಾಜಹಂಸಗಳ ಮಧ್ಯದಲ್ಲಿ ಕಮಲವು ಹೇಗೆ ಶೋಭಿಸುತ್ತಿರುವುದೋ, ಹಾಗೆ ಚಲಿಸುತ್ತಿರುವ ಚಾಮರಗಳ ಮಧ್ಯದಲ್ಲಿ ಶಿವನ ಮುಖಮಂಡಲವು ಶೋಭಿಸುತ್ತಿದ್ದಿತು. ॥೪೧॥ ಶಿಕ್ಷಾವ್ಯಾಕರಣಾದಿಷಡಂಗ ಯುಕ್ತಗಳಾದ ಋಗಾದಿವೇದಗಳು ಉಪನಿಷದ್ರೂಪಮಸ್ತಕಗಳಿಂದ ಆ ಪರಮೇಶ್ವರ ನನ್ನು ಮನೋಹರವಾದ ಚೂಡಾಮಣಿಯಂತೆ ವಹಿಸುವಂಥವುಗಳಾಗಿ ಮಂತ್ರದಿಂದ ಭಕ್ತಿಪೂರ್ವಕವಾಗಿ ಸೇವಿಸುತ್ತಿದ್ದುವು. ॥೪೨॥ ಆ ಶಿವಸಂಬಂಧಿಗಳಾದ ಆಯುಧ ಗಳನ್ನು ಧರಿಸಿರುವವರೂ, ಶಿವಸಮಾನವೇಷಾಲಂಕೃತರೂ, ಶಿವನಿಗೆ ಅಂಗಭೂತರೂ ಆದ ಕೆಲಜನಸ್ತ್ರೀಯರು ಪರಮೇಶ್ವರನನ್ನು ಸೇವಿಸುತ್ತಿದ್ದರು. ॥೪೩॥ ಶಿವನಿಗೆ ಆಪ್ತಾಧಿಕಾರಿಗಳಾದ ಅನಂತ - ಸೂಕ್ಷ್ಮ - ಶಿವೋತ್ತಮ - ಏಕನೇತ್ರ - ಏಕರುದ್ರ - ತ್ರಿಮೂರ್ತಿ - ಶ್ರೀಕಂಠ - ಶಿಖಂಡಿ - ನಾಮಕರಾದ ಎಂಟು ಜನ ವಿದ್ಯೇಶ್ವರರು ಆ ಪರಶಿವನನ್ನು ಸೇವಿಸುತ್ತಿದ್ದರು. ॥೪೪॥ ನಂದಿ - ಮಹಾಕಾಲ - ಚಂಡ - ಭೃಂಗಿರಿಟಿ- ಘಂಟಾಕರ್ಣ - ಪುಷ್ಪದಂತ - ಕಪಾಲಿ - ವೀರಭದ್ರ ಇವರೇಮೊದಲಾದ ನಿರಂಕುಶ ಸತ್ತ್ವಶಾಲಿಗಳೂ ಮಹಾಬಲಪರಾಕ್ರಮಶಾಲಿಗಳೂ ಆದ ಪ್ರಮಥರು ಪರಮೇಶ್ವರ ನನ್ನು ಸೇವಿಸುತ್ತಿದ್ದರು. ॥೪೫-೪೬॥ ಯಾರ ಸಿದ್ಧಿಯ ಮುಂದೆ ಅಣಿಮಾ

ಅಣಿಮಾದಿಕಮೈಶ್ವರ್ಯಂ ಯೇಷಾಂ ಸಿದ್ಧೇರಪೋಹನಂ ।
ಬ್ರಹ್ಮಾದಯಃ ಸುರಾ ಯೇಷಾಮಾಜ್ಞಾಲಂಘನಭೀರವಃ ॥೪೭॥
ಮೋಕ್ಷಲಕ್ಷ್ಮೀಪರಿಷ್ವಂಗಮುದಿತಾ ಯೇಽಂತರಾತ್ಮನಾ ।
ಯೇಷಾಮೀಷತ್ಕರಂ ವಿಶ್ವಸರ್ಗಸಂಹಾರಕಲ್ಪನಂ ॥೪೮॥
ಜ್ಞಾನಶಕ್ತಿಃ ಪರಾ ಯೇಷಾಂ ಸರ್ವವಸ್ತುಪ್ರಕಾಶಿನೀ ।
ಆನಂದಕಣಿಕಾ ಯೇಷಾಂ ಹರಿಬ್ರಹ್ಮಾದಿಸಂಪದಃ ॥೪೯॥
ಆಕಾಂಕ್ಷಂತೇ ಪದಂ ಯೇಷಾಂ ಯೋಗಿನೋ ಯೋಗತತ್ಪರಾಃ ।
ಕಾಂಕ್ಷಣೀಯಫಲೋ ಯೇಷಾಂ ಸಂಕಲ್ಪಃ ಕಲ್ಪಪಾದಪಃ ॥೫೦॥
ಕರ್ಮಕಾಲಾದಿಕಾರ್ಪಣ್ಯಚಿಂತಾ ಯೇಷಾಂ ನ ವಿದ್ಯತೇ ।
ಯೇಷಾಂ ವಿಕ್ರಮಸನ್ನಾಹಾ ಮೃತ್ಯೋರಪಿ ಚ ಮೃತ್ಯವಃ ॥
ತೇ ಸಾರೂಪ್ಯಪದಂ ಪ್ರಾಪ್ತಾಃ ಪ್ರಮಥಾ ಭೇಜಿರೇ ಶಿವಂ ॥೫೦॥
ಬ್ರಹ್ಮೋಪೇಂದ್ರಮಹೇಂದ್ರಾದ್ಯಾ ವಿಶ್ವತಂತ್ರಾಧಿಕಾರಿಣಃ ।
ಆಯುಧಾಲಂಕೃತಪ್ರಾಂತಾಃ ಪರಿತಸ್ತಂ ಸಿಷೇವಿರೇ ॥೫೧॥

---

ಮಹಿಮಾದ್ಯಷ್ಟಸಿದ್ಧಿಗಳು ತುಚ್ಛವಾದುವುಗಳೋ, ಬ್ರಹ್ಮಾದಿಸಮಸ್ತದೇವತೆಗಳು ಯಾರ ಆಜ್ಞೆಯನ್ನು ಉಲ್ಲಂಘಿಸಲು ಭಯಪಡುವರೋ, ಯಾರು ಮೋಕ್ಷಲಕ್ಷ್ಮಿಯ ಆಲಿಂಗನದಿಂದ ಸಂತುಷ್ಟಚಿತ್ತರಾಗಿರುವರೋ, ಯಾರಿಗೆ ಜಗತ್ತಿನ ಸೃಷ್ಟಿಸಂಹಾರಗಳು ಅತಿಸುಲಭಸಾಧ್ಯವಾದುವುಗಳೋ, ಯಾರ ಜ್ಞಾನಶಕ್ತಿಯು ಸರ್ವವಸ್ತುಗಳ ಯಥಾರ್ಥಜ್ಞಾನವನ್ನುಂಟುಮಾಡಿಕೊಡುವುದೋ, ಹರಿಬ್ರಹ್ಮಾದಿದೇವತೆಗಳ ಸಂಪತ್ತುಗಳು ಯಾರಿಗೆ ಲೇಶಮಾತ್ರಗಳೋ, ಶಿವಯೋಗತತ್ಪರರಾದ ಮಹಾಯೋಗಿಗಳು ಯಾರ ಸ್ಥಾನವನ್ನು ಇಚ್ಛಿಸುತ್ತಾರೆಯೋ, ಯಾರ ಸಂಕಲ್ಪವು ಸರ್ವರಿಂದಲೂ ಅಪೇಕ್ಷಿಸಲ್ಪಡುವ ಫಲವುಳ್ಳುದಾಗಿ ಕಲ್ಪವೃಕ್ಷಸದೃಶವಾಗಿದೆಯೋ, ಸಂಚಿತಾಗಾಮಿಪ್ರಾರಬ್ಧಕರ್ಮಗಳೂ, ಭೂತಭವಿಷ್ಯದ್ವರ್ತಮಾನಕಾಲಗಳೂ, ಕಾಮಾದಿಗಳಿಂದ ಉತ್ಪನ್ನವಾದ ಕಾರ್ಪಣ್ಯಚಿಂತೆಯೂ ಯಾರಿಗೆ ಇರುವುದಿಲ್ಲವೋ, ಯಾರ ಪರಾಕ್ರಮೋದ್ಯೋಗಗಳು ಮೃತ್ಯುವಿಗೆ ಮೃತ್ಯುಸ್ವರೂಪಗಳಾಗಿವೆಯೋ, ಶಿವಸಾರೂಪ್ಯವನ್ನು ಹೊಂದಿದ ಆ ಪ್ರಮಥರು ಪರಮೇಶ್ವರನನ್ನು ಸೇವಿಸುತ್ತಿದ್ದರು. ॥೪೭-೪೮-೪೯-೫೦-೫೧॥ ಬ್ರಹ್ಮ-ವಿಷ್ಣು-ಇಂದ್ರ ಮೊದಲಾದ ಮೂವತ್ತುಮೂರುಕೋಟಿದೇವತೆಗಳು ತಮ್ಮ ತಮ್ಮ ಆಯುಧಗಳಿಂದ ಅಲಂಕೃತರಾಗಿ ವಿಶ್ವಸೂತ್ರಾಧಿಕಾರಿಯಾದ

ಆದಿತ್ಯಾ ವಸವೋ ರುದ್ರಾ ಯಕ್ಷಗಂಧರ್ವಕಿನ್ನರಾಃ ।
ದಾನವಾ ರಾಕ್ಷಸಾ ದೈತ್ಯಾಃ ಸಿದ್ಧಾ ವಿದ್ಯಾಧರೋರಗಾಃ ॥
ಅಭಜಂತ ಮಹಾದೇವಮಪರಿಚ್ಛಿನ್ನಸೈನಿಕಾಃ ॥೫೩॥

ವಸಿಷ್ಠೋ ವಾಮದೇವಶ್ಚ ವಿಶ್ವಾಮಿತ್ರಾತ್ರಿಶೌನಕಾಃ ।
ದಧೀಚಿರ್ಗೌತಮಶ್ಚೈವ ಸಾನಂದಶುಕನಾರದಾಃ ॥೫೪॥

ಉಪಮನ್ಯುಭೃಗುವ್ಯಾಸಪರಾಶರಮರೀಚಯಃ ।
ಇತ್ಯಾದ್ಯಾ ಮುನಯಃ ಸರ್ವೇ ನೀಲಕಂಠಂ ಸಿಷೇವಿರೇ ॥೫೫॥

ಪಾರ್ಶ್ವಸ್ಥಪರಿವಾರಾಣಾಂ ವಿಮಲಾಂಗೇಷು ಬಿಂಬಿತಃ ।
ಸರ್ವಾಂತರ್ಗತಮಾತ್ಮಾನಂ ಸ ರೇಜೇ ದರ್ಶಯನ್ನಿವ ॥೫೬॥

ಕ್ಷಣಂ ಸ ಶಂಭುರ್ದೇವಾನಾಂ ಕಾರ್ಯಭಾಗಂ ನಿರೂಪಯನ್ ।
ಕ್ಷಣಂ ಗಂಧರ್ವರಾಜಾನಾಂ ಗಾನವಿದ್ಯಾಂ ವಿಭಾವಯನ್ ॥೫೭॥

---

ಪರಮೇಶ್ವರನನ್ನು ಸುತ್ತುಗಟ್ಟಿಕೊಂಡು ಸೇವಿಸುತ್ತಿದ್ದರು. ॥೫೨॥ ದ್ವಾದಶಾದಿತ್ಯರೂ, ಅಷ್ಟವಸುಗಳೂ, ಏಕಾದಶರುದ್ರರೂ, ಕುಬೇರಮೊದಲಾದ ಯಕ್ಷರೂ, ಹಾಹಾಮೊದಲಾದ ಗಂಧರ್ವರೂ, ಅಶ್ವಮುಖನೇಮೊದಲಾದ ಕಿನ್ನರರೂ, ದಾನವರೂ, ರಾಕ್ಷಸರೂ, ದೈತ್ಯರೂ, ಆದಿನಾಥನೇಮೊದಲಾದ ಸಿದ್ಧರೂ, ಮಣಿಭದ್ರಾದಿ ವಿದ್ಯಾಧರರೂ, ಶೇಷನೇಮೊದಲಾದ ಸರ್ಪಗಳೂ ಅಸಂಖ್ಯಪರಿವಾರದಿಂದೊಡಗೂಡಿ ಪರಮೇಶ್ವರನನ್ನು ಭಜಿಸುತ್ತಿದ್ದರು. ॥೫೩॥ ವಸಿಷ್ಠ-ವಾಮದೇವ-ವಿಶ್ವಾಮಿತ್ರ-ಅತ್ರಿ-ಶೌನಕ-ದಧೀಚಿ-ಗೌತಮ-ಸಾನಂದ-ಶುಕ-ನಾರದ ಉಪಮನ್ಯು-ಭೃಗು-ವ್ಯಾಸ-ಪರಾಶರ-ಮರೀಚಿಮೊದಲಾದ ಮಹರ್ಷಿಗಳು ಪರಮೇಶ್ವರನನ್ನು ಸೇವಿಸುತ್ತಿದ್ದರು. ॥೫೪-೫೫॥ ತನ್ನ ಎಡಬಲಭಾಗದಲ್ಲಿ ನಿಂತಿದ್ದ ಸಮಸ್ತಪರಿವಾರದವರ ಅತ್ಯಂತ ನಿರ್ಮಲವಾದ ಶರೀರಗಳಲ್ಲಿ ಪ್ರತಿಬಿಂಬಿತನಾದ ಶ್ರೀಪರಮೇಶ್ವರನು ತಾನು ಸರ್ವಾಂತರ್ಯಾಮಿಯೆಂಬುದನ್ನು ತೋರಿಸುವನೋ ಎನ್ನುವಂತೆ ಪರಿಶೋಭಿಸುತ್ತಿದ್ದನು. ॥೫೬॥

## ಶ್ರೀಪರಮೇಶ್ವರನ ರಾಜವ್ಯಾಪಾರವರ್ಣನೆ.

ಪರಮೇಶ್ವರನು ಕ್ಷಣಕಾಲ ದೇವತೆಗಳಿಗೆ ನೀವು ಇಂತಹ ಇಂತಹ ಕಾರ್ಯಗಳನ್ನು ಮಾಡಬೇಕೆಂದು ಆಜ್ಞಾಪಿಸುತ್ತಿದ್ದನು. ಕ್ಷಣಕಾಲ ಗಂಧರ್ವರ ಮನೋಹರವಾದ ಗಾನವನ್ನು ಕೇಳುತ್ತಿದ್ದನು. ॥೫೭॥ ಕ್ಷಣಕಾಲ ಬ್ರಹ್ಮವಿಷ್ಣುಮೊದಲಾದ

ಬ್ರಹ್ಮವಿಷ್ಣ್ವಾದಿಭಿರ್ದೇವೈಃ ಕ್ಷಣಮಾಲಾಪಮಾಚರನ್ ।
ಕ್ಷಣಂ ದೇವಮೃಗಾಕ್ಷೀಣಾಂ ಲಾಲಯನ್ ನೃತ್ಯವಿಭ್ರಮಂ ॥೫೭॥
ವ್ಯಾಸಾದೀನಾಂ ಕ್ಷಣಂ ಕುರ್ವನ್ ವೇದೋಚ್ಚಾರೇಷು ಗೌರವಂ ।
ನಿದಧಾನಃ ಕ್ಷಣಂ ದೇವ್ಯಾ ಮುಖೇ ಬಿಂಬಾಧರೇ ದೃಶಃ ॥
ಹಾಸ್ಯನೃತ್ಯಂ ಕ್ಷಣಂ ಪಶ್ಯನ್ ಭೃಂಗಿಣಾ ಪರಿಕಲ್ಪಿತಂ ॥೫೯॥
ನಂದಿನಾ ವೇತ್ರಹಸ್ತೇನ ಸರ್ವತಂತ್ರಾಧಿಕಾರಿಣಾ ।
ಅಮುಂಚತಾ ಸದಾ ಪಾರ್ಶ್ವಮಾತ್ಮಾಭಿಪ್ರಾಯವೇದಿನಾ ॥೬೦॥
ಚೋದಿತಾನಾನಯನ್ ಕಾಂಶ್ಚಿದ್ವಿಸೃಜನ್ ಭ್ರೂವಿಲಾಸತಃ ।
ಸಂಭಾವಯಂಸ್ತಥಾ ಚಾನ್ಯಾನನ್ಯಾನಪಿ ನಿಯಾಮಯನ್ ॥೬೧॥
ಸಮಸ್ತಭುವನಾಧೀಶಮೌಲಿಲಾಲಿತಶಾಸನಃ ।
ಅಕುಂಠಶಕ್ತಿರವ್ಯಾಜಲಾವಣ್ಯಲಲಿತಾಕೃತಿಃ ॥೬೨॥
ಸ್ಥಿರಯೌವನಸೌರಭ್ಯಶೃಂಗಾರಿತಕಲೇವರಃ ।
ಆತ್ಮಶಕ್ತ್ಯಮೃತಾಸ್ವಾದರಸೋಲ್ಲಾಸಿತಮಾನಸಃ ॥೬೩॥

---

ದೇವತೆಗಳೊಡನೆ ಮಾತನಾಡುತ್ತಿದ್ದನು. ಕ್ಷಣಕಾಲ ದೇವತಾಸ್ತ್ರೀಯರ ನರ್ತನ ವೈಭವವನ್ನು ನೋಡುತ್ತಿದ್ದನು. ॥೫೭॥ ಕ್ಷಣಕಾಲ ವ್ಯಾಸಾದಿಮಹರ್ಷಿಗಳು ಮಾಡುತ್ತಿರುವ ವೇದೋಚ್ಚಾರಣವನ್ನು ಪರಾಮರ್ಶಿಸಿ ಅವರನ್ನು ಗೌರವಿಸುತ್ತಿದ್ದನು. ಕ್ಷಣಕಾಲ ಪಾರ್ವತೀದೇವಿಯ ಮುಖಕಮಲದಲ್ಲಿ ದೃಷ್ಟಿಯನ್ನಿಡುತ್ತಿದ್ದನು. ಕ್ಷಣಕಾಲ ಭೃಂಗಿಯು ಆಚರಿಸುತ್ತಿದ್ದ ಹಾಸ್ಯಮಯನರ್ತನವನ್ನು ನೋಡುತ್ತಿದ್ದನು. ॥೫೯॥ ಸಮಸ್ತಕಾರ್ಯಾಧಿಕಾರಿಯೂ, ದಂಡಧಾರಿಯೂ, ಯಾವಾಗಲೂ ಎಡಬಿಡದೆ ಪರಮೇಶ್ವರನ ಸನ್ನಿಧಿಯಲ್ಲಿರುವವನೂ, ಪರಮೇಶ್ವರನ ಅಭಿಪ್ರಾಯವನ್ನು ತಿಳಿದು ಅದರಂತೆ ವರ್ತಿಸುವವನೂ ಆದ ನಂದಿಕೇಶ್ವರನಿಂದ ಕೆಲವರನ್ನು ಕರೆಯಿಸುತ್ತಿದ್ದನು. ಕೆಲವರನ್ನು ನೇತ್ರಸಂಜ್ಞೆಯಿಂದ ಕಳುಹಿಸುತ್ತಿದ್ದನು. ಕೆಲವರನ್ನು ಪ್ರಿಯೋಕ್ತಿಗಳಿಂದ ಸಂತೋಷಪಡಿಸುತ್ತಿದ್ದನು. ಕೆಲವರನ್ನು ಬಂಧಿಸುತ್ತಿದ್ದನು. ॥೬೦-೬೧॥ ತಾನು ಚತುರ್ದಶಲೋಕಾಧಿಪತಿಯಾದುದರಿಂದ ತನ್ನ ಆಜ್ಞೆಯನ್ನು ದೇವತೆಗಳ ದ್ವಾರಾ ನೆರವೇರಿಸತಕ್ಕವನೂ, ಅಪ್ರತಿಹತವಾದ ಶಕ್ತಿಯುಳ್ಳವನೂ, ಸ್ವಾಭಾವಿಕವಾದ ಸೌಂದರ್ಯದಿಂದ ಮನೋಹರಾಕಾರವುಳ್ಳವನೂ, ಯಾವಾಗಲೂ ಸ್ಥಿರವಾಗಿರುವ ತಾರುಣ್ಯದಿಂದ ಪರಿಶೋಭಿಸುತ್ತಿರುವ ಅವಯವಗಳುಳ್ಳವನೂ, ತನ್ನಲ್ಲಿ ನಿತ್ಯ ಸಂಬಂಧದಿಂದ ನೆಲಸಿರುವ ಶಕ್ತಿರೂಪಮಹಾನಂದರಸಾಸ್ವಾದನದಿಂದ ಸಂತುಷ್ಟವಾದ

ಸ್ವಾಭಾವಿಕಮಹೈಶ್ವರ್ಯವಿಶ್ರಾಂತಿಪರಮಾವಧಿಃ ।
ನಿಷ್ಕಲಂಕಮಹಾಸತ್ತ್ವನಿರ್ಮಿತಾನೇಕವಿಗ್ರಹಃ ॥೬೪॥
ಅಖಂಡಾರಾತಿದೋರ್ದಂಡಕಂಡೂಖಂಡನಪಂಡಿತಃ ।
ಚಿಂತಾಮಣಿಃ ಪ್ರಪನ್ನಾನಾಂ ಶ್ರೀಕಂಠಃ ಪರಮೇಶ್ವರಃ ॥೬೫॥
ಸಭಾಂತರಗತಂ ತಂತ್ರಂ ರೇಣುಕಂ ಗಣನಾಯಕಂ ।
ಪ್ರಸಾದಂ ಸುಲಭಂ ದಾತುಮಾಹೂಯೇತ್ಥಂ ಸಮಾದಿಶತ್ ॥೬೬॥
ಶ್ರೀಶೈಲಸ್ಯೋತ್ತರೇ ಭಾಗೇ ತ್ರಿಲಿಂಗವಿಷಯೇ ಶುಭೇ ।
ಕುಲ್ಯಪಾಕಾಭಿಧಂ ಪುಣ್ಯಕ್ಷೇತ್ರಮೇಕಂ ವಿರಾಜತೇ ॥೬೭॥
ಸೋಮೇಶ್ವರಾಭಿಧಾನಸ್ಯ ತತ್ರ ವಾಸವತೋ ಮಮ ।
ಅಸ್ಪೃಶನ್ಮಾನುಷಂ ಭಾವಂ ಲಿಂಗಾತ್ ಪ್ರಾದುರ್ಭವಿಷ್ಯಸಿ ॥೬೮॥
ಮದೀಯಲಿಂಗಸಂಭೂತಂ ಮದ್ಭಕ್ತಪರಿಪಾಲಕಂ ।
ವಿಸ್ಮಿತಾ ಮಾನುಷಾಃ ಸರ್ವೇ ತ್ವಾಂ ಭಜಂತು ಮದಾಜ್ಞಯಾ ॥೬೯॥

---

ಮನಸ್ಸುಳ್ಳವನೂ, ತನ್ನಲ್ಲಿ ಸ್ವಾಭಾವಿಕವಾಗಿ ನೆಲಸಿರುವ ಸರ್ವಜ್ಞತ್ವಾದಿಮಹೈಶ್ವರ್ಯಗಳ ವಿಶ್ರಾಂತಿಗೆ ಪರ್ಯಂತಭೂಮಿಸ್ವರೂಪನೂ, ನಿಷ್ಕಲಂಕವಾದ ಮಹಾಶಕ್ತಿಯಿಂದ ಅನೇಕಾನೇಕಮಂಗಲಮೂರ್ತಿಗಳನ್ನು ನಿರ್ಮಿಸುವವನೂ, ಅಸಂಖ್ಯರಾದ ಸಜ್ಜನವೈರಿಗಳ ಭುಜಕಂಡೂತಿ (ತಿಂಡಿ-ನವೆ) ಯನ್ನು ನಾಶಮಾಡುವುದರಲ್ಲಿ ಸಮರ್ಥನೂ, ಶರಣಾಗತರಿಗೆ ಚಿಂತಾಮಣಿಸ್ವರೂಪನೂ ಆಗಿರುವ ಪರಮೇಶ್ವರನು ಪರಿಶೋಭಿಸುತ್ತಿದ್ದನು. ॥೬೨-೬೩-೬೪-೬೫॥ ಇಂತಹ ಭವ್ಯವಾದ ಶಿವಸಭೆಯನ್ನು ಅಲಂಕರಿಸಿದವನೂ, ಸಭಾಪ್ರಮುಖನೂ, ಪ್ರಮಥನಾಯಕನೂ ಆದ ರೇಣುಕಗಣನಾಥನನ್ನು, ಪರಮೇಶ್ವರನು ತಾಂಬೂಲಪ್ರಸಾದವನ್ನು ಅನುಗ್ರಹಿಸುವುದಕ್ಕೋಸ್ಕರ ಕರೆದು, ಈ ರೀತಿಯಾಗಿ ಆಜ್ಞಾಪಿಸಿದನು. ॥೬೬॥ ಎಲೈ ರೇಣುಕನೇ! ಶ್ರೀಶೈಲಕ್ಷೇತ್ರಕ್ಕೆ ಉತ್ತರಭಾಗದಲ್ಲಿರುವ ಆಂಧ್ರ (ತೆಲಗು) ದೇಶದಲ್ಲಿ, "ಕುಲ್ಯಪಾಕ" ಎಂಬ ಹೆಸರಿನ ಒಂದಾನೊಂದು ಪುಣ್ಯಕ್ಷೇತ್ರವು ವಿರಾಜಿಸುತ್ತಿರುವುದು. ॥೬೭॥ ಆ ಪರಮಪವಿತ್ರ ಕ್ಷೇತ್ರದಲ್ಲಿ "ಸೋಮೇಶ್ವರ" ಎಂಬ ಅಭಿಧಾನದಿಂದ ನೆಲಸಿರುವ ನನ್ನ ಲಿಂಗರೂಪ ಶರೀರದಿಂದ, ನೀನು ಮಾನವರೂಪವನ್ನು ಧರಿಸದೆ (ತೇಜೋಮಯಶರೀರಿಯಾಗಿ) ಅವತರಿಸು. ॥೬೮॥ ಶಿವಲಿಂಗಾವತಾರಿಯೂ, ಶಿವಭಕ್ತಪಾಲಕನೂ ಆದ ನಿನ್ನನ್ನು ನೋಡಿ ಮಾನವರೆಲ್ಲರೂ ಚಕಿತರಾಗಿ, ನನ್ನ ಆಜ್ಞಾನುಸಾರವಾಗಿ ಸೇವಿಸುವರು. ॥೬೯॥

ಮದದ್ವೈತಪರಂ ಶಾಸ್ತ್ರಂ ವೇದವೇದಾಂತಸಮ್ಮತಂ ।
ಸ್ಥಾಪಯಿಷ್ಯಸಿ ಭೂಲೋಕೇ ಸರ್ವೇಷಾಂ ಹಿತಕಾರಕಂ ॥೭೦॥
ಮಮ ಪ್ರತಾಪಮತುಲಂ ಮದ್ಭಕ್ತಾನಾಂ ವಿಶೇಷತಃ ।
ಪ್ರಕಾಶಯ ಮಹೀಭಾಗೇ ವೇದಮಾರ್ಗಾನುಸಾರತಃ ॥೭೧॥

ಇತ್ಯುಕ್ತ್ವಾ ಪರಮೇಶ್ವರಃ ಸ ಭಗವಾನ್ ಭದ್ರಾಸನಾದುತ್ಥಿತೋ
ಬ್ರಹ್ಮೋಪೇಂದ್ರಮುಖಾನ್ವಿಸೃಜ್ಯ ವಿಬುಧಾನ್ ಭ್ರೂಸಂಜ್ಞಯಾ ಕೇವಲಂ।
ಪಾರ್ವತ್ಯಾ ಸಹಿತೋ ಗಣೈರಭಿಮತೈಃ ಪ್ರಾಪ ಸ್ವಮಂತಃಪುರಂ
ಕ್ಷೋಣೀಭಾಗಮವಾತರತ್ ಪಶುಪತೇರಾಜ್ಞಾವಶಾದ್ರೇಣುಕಃ ॥೭೨॥

ಇತಿ ಶ್ರೀಸಿದ್ಧಾಂತಶಿಖಾಮಣೌ ಶಿವಸಭಾವರ್ಣನಂ ನಾಮ
ತೃತೀಯಪರಿಚ್ಛೇದಃ ಪರಿಸಮಾಪ್ತಃ



---

ಸಮಸ್ತಮಾನವರಿಗೆ ಮಂಗಲ (ಮೋಕ್ಷ) ದಾಯಕವೂ, ವೇದವೇದಾಂತ ಸಮ್ಮತವೂ ಆದ ಶಿವಾದ್ವೈತಸಿದ್ಧಾಂತವನ್ನು ಭೂಲೋಕದಲ್ಲಿ ಸ್ಥಾಪಿಸು. ॥೭೦॥ ನೀನು ಭೂವಲಯದಲ್ಲಿ ನನ್ನ ಮಹಿಮೆಯನ್ನೂ, ವಿಶೇಷವಾಗಿ ನನ್ನ ಭಕ್ತರ ಮಹಿಮೆಯನ್ನೂ ವೇದಮಾರ್ಗಾನುಸಾರವಾಗಿ ಪ್ರಕಾಶಪಡಿಸು. ॥೭೧॥ ಈ ಪ್ರಕಾರವಾಗಿ ಪರಮೇಶ್ವರನು ಶ್ರೀರೇಣುಕಗಣಾಧೀಶ್ವರನಿಗೆ ಆಜ್ಞೆಯನ್ನು ಮಾಡಿ, ಭದ್ರಾಸನದಿಂದ ಎದ್ದು, ಭ್ರೂಸಂಜ್ಞೆಯಿಂದ ಬ್ರಹ್ಮವಿಷ್ಣುಮೊದಲಾದ ದೇವತೆಗಳಿಗೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಟ್ಟು, ನಂದ್ಯಾದಿಪ್ರಮಥಗಣದೊಡನೆ ಪಾರ್ವತೀಸಹಿತನಾಗಿ ತನ್ನ ಅಂತಃಪುರವನ್ನು ಪ್ರವೇಶಿಸಿದನು. ಇತ್ತ ಶ್ರೀರೇಣುಕಗಣಾಧೀಶ್ವರನು ಪರಮೇಶ್ವರನ ಆಜ್ಞಾನುಸಾರವಾಗಿ ಭೂಮಂಡಲದಲ್ಲಿ ಅವತರಿಸಿದನು. ॥೭೨॥

ಇಂತು ಶ್ರೀಸಿದ್ಧಾಂತಶಿಖಾಮಣಿಯಲ್ಲಿ ಶಿವಸಭಾವರ್ಣನಾತ್ಮಕವಾದ
ಮೂರನೆಯ ಪರಿಚ್ಛೇದವು ಪರಿಸಮಾಪ್ತವಾದುದು.



ಶ್ರೀಜಗದ್ಗುರುರೇಣುಕಾಚಾರ್ಯಃ ಪ್ರಸೀದತು.

# ಚತುರ್ಥಪರಿಚ್ಛೇದಃ



ಅಥ ತ್ರಿಲಿಂಗವಿಷಯೇ ಕುಲ್ಯಪಾಕಾಭಿಧೇ ಸ್ಥಲೇ ।
ಸೋಮೇಶ್ವರಮಹಾಲಿಂಗಾತ್ಪ್ರಾದುರಾಸೀತ್ ಸ ರೇಣುಕಃ ॥೧॥

ಪ್ರಾದುರ್ಭೂತಂ ತಮಾಲೋಕ್ಯ ಶಿವಲಿಂಗಾತ್ತ್ರಿಲಿಂಗಜಾಃ ।
ವಿಸ್ಮಿತಾಃ ಪ್ರಾಣಿನಃ ಸರ್ವೇ ಬಭೂವುರತಿತೇಜಸಂ ॥೨॥

ಭಸ್ಮೋದ್ಧೂಲಿತಸರ್ವಾಂಗಂ ಸಾರರುದ್ರಾಕ್ಷಭೂಷಣಂ ।
ಜಟಾಮುಕುಟಸಂಯುಕ್ತಂ ತ್ರಿಪುಂಡ್ರಾಂಕಿತಮಸ್ತಕಂ ॥೩॥

ಕಟೀತಟೀಪಟೀಭೂತಕಂಥಾಪಟಲಬಂಧುರಂ ।
ದಧಾನಂ ಯೋಗದಂಡಂ ಚ ಭಸ್ಮಾಧಾರಂ ಕಮಂಡಲುಂ ॥೪॥

ಶಿವಾದ್ವೈತಪರಿಜ್ಞಾನಪರಮಾನಂದಮೋದಿತಂ ।
ನಿರ್ಧೂತಸರ್ವಸಂಸಾರವಾಸನಾದೋಷಪಂಜರಂ ॥೫॥

---

## ನಾಲ್ಕನೆಯ ಪರಿಚ್ಛೇದವು.



### ಶ್ರೀರೇಣುಕಗಣಾಧೀಶ್ವರನ ಲಿಂಗಾವತಾರವರ್ಣನೆ.

ವ್ಯಾಖ್ಯಾನ—ಪರಮೇಶ್ವರನ ಅಪ್ಪಣೆಯಮೇರೆಗೆ ಶ್ರೀರೇಣುಕಗಣಾಧೀಶ್ವರನು ತ್ರಿಲಿಂಗ (ತೆಲಗು) ದೇಶದಲ್ಲಿ ಸುಪ್ರಸಿದ್ಧಶಿವಕ್ಷೇತ್ರವಾದ ಶ್ರೀಕುಲ್ಯಪಾಕಕ್ಷೇತ್ರದಲ್ಲಿ ವಿರಾಜಿಸುತ್ತಿರುವ ಶ್ರೀಸೋಮೇಶ್ವರನಾಮಕಮಹಾಲಿಂಗದಿಂದ ಅವತರಿಸಿದನು. ॥೧॥ ತ್ರಿಲಿಂಗದೇಶದ ಜನರೆಲ್ಲರೂ, ಶಿವಲಿಂಗದಿಂದ ಅವತರಿಸಿದ ಮಹಾತೇಜಃಶಾಲಿಯಾದ ಶ್ರೀರೇಣುಕಗಣಾಧೀಶ್ವರನನ್ನು ನೋಡಿ, ಆಶ್ಚರ್ಯದಿಂದ ಕೂಡಿದವರಾದರು. ॥೨॥ ಭಸ್ಮಲಿಪ್ತವಾದ ಶರೀರವುಳ್ಳವನೂ, ರುದ್ರಾಕ್ಷಾಲಂಕೃತನೂ, ಜಟಾಮುಕುಟಮಂಡಿತನೂ, ತ್ರಿಪುಂಡ್ರಾಂಕಿತಮಸ್ತಕನೂ, ನಡುವಿನಲ್ಲಿ ವಸ್ತ್ರದಂತಿದ್ದ ಕಂಥೆಯಿಂದ ಮನೋಹರನಾದವನೂ, ಯೋಗದಂಡ-ಕಮಂಡಲು-ಭಸ್ಮಘುಂಟಿಕೆಗಳನ್ನು ಧರಿಸಿದವನೂ, ಶಿವಾದ್ವೈತಸಿದ್ಧಾಂತಜ್ಞಾನದಿಂದುಂಟಾದ ಪರಮಾನಂದದಲ್ಲಿ ಲೀನನಾದವನೂ, ಸಮಸ್ತಸಂಸಾರವಾಸನಾದೋಷಗಳ ಸಮೂಹದಿಂದ ದೂರನಾದವನೂ, ಶಿವಾಗಮ



ಶ್ರೀಕೊಲನುಪಾಕಕ್ಷೇತ್ರವಿರಾಜಮಾನ ಶ್ರೀಸೋಮನಾಥಲಿಂಗದಿಂದ
ಶ್ರೀಜಗದ್ಗುರುರೇಣುಕಾಚಾರ್ಯರ ಅವತಾರ.

ಶಿವಾಗಮಸುಧಾಸಿಂಧುಸಮುನ್ಮೇಷಸುಧಾಕರಂ ।
ಚಿತ್ತಾರವಿಂದಸಂಗೂಢಶಿವಪಾದಾಂಬುಜದ್ವಯಂ ॥೬॥

ಯಮಾದಿಯೋಗತಂತ್ರಜ್ಞಂ ಸ್ವತಂತ್ರಂ ಸರ್ವಕರ್ಮಸು ।
ಸಮಸ್ತಸಿದ್ಧಸಂತಾನಸಮುದಾಯಶಿಖಾಮಣಿಂ ॥೭॥

ವೀರಸಿದ್ಧಾಂತನಿರ್ವಾಹಕೃತಪಟ್ಟನಿಬಂಧನಂ ।
ಆಲೋಕಮಾತ್ರನಿರ್ಭಿನ್ನಸಮಸ್ತಪ್ರಾಣಿಪಾತಕಂ ॥೮॥

ತಮಪೃಚ್ಛನ್ ಜನಾಃ ಸರ್ವೇ ನಮಂತಃ ಕೋ ಭವಾನಿತಿ ।
ಇತಿ ಪೃಷ್ಟೋ ಮಹಾಯೋಗೀ ಜನೈರ್ವಿಸ್ಮಿತಮಾನಸೈಃ ॥೯॥

ಪ್ರತ್ಯುವಾಚ ಶಿವಾದ್ವೈತಮಹಾನಂದಪರಾಯಣಃ ।
ಪಿನಾಕಿನಃ ಪಾರ್ಶ್ವವರ್ತೀ ರೇಣುಕಾಖ್ಯೋ ಗಣೇಶ್ವರಃ ॥೧೦॥

ಶಿವಾದೇಶಾನುಸಾರೇಣ ಶಿವಲಿಂಗಾದಿಹಾಭವಂ ।
ನಾಮ್ನಾ ರೇಣುಕಸಿದ್ಧೋಽಹಂ ಸಿದ್ಧಸಂತಾನನಾಯಕಃ ॥
ಸ್ವಚ್ಛಂದಚಾರೀ ಲೋಕೇಽಸ್ಮಿನ್ ಶಿವಸಿದ್ಧಾಂತಪಾಲಕಃ ॥೧೧॥

---

ರೂಪವಾದ ಅಮೃತಸಮುದ್ರದ ಅಭಿವೃದ್ಧಿಗೆ ಚಂದ್ರಸ್ವರೂಪನೂ, ತನ್ನ ಹೃದಯ ಕಮಲದಲ್ಲಿ ಪರಶಿವನ ಪಾದಕಮಲಗಳನ್ನು ಸದಾ ಸಂಬಂಧಿಸಿಕೊಂಡಿರುವವನೂ, ಯಮನಿಯಮಾದ್ಯಷ್ಟಾಂಗಯೋಗಸ್ವರೂಪವನ್ನು ತಿಳಿದವನೂ, ಸಮಸ್ತಸಿದ್ಧಕುಲ ಸಮುದಾಯಕ್ಕೆ ಶಿಖಾರತ್ನಸ್ವರೂಪನೂ, ವೀರಶೈವಸಿದ್ಧಾಂತವನ್ನು ನೆಲೆಗೊಳಿಸುವುದ ರಲ್ಲಿ ಪಟ್ಟವನ್ನು ಕಟ್ಟಿಕೊಂಡವನೂ, ದರ್ಶನಮಾತ್ರದಿಂದ ಸಮಸ್ತಪ್ರಾಣಿಗಳ ಪಾಪವನ್ನು ನಾಶಮಾಡತಕ್ಕವನೂ ಆದ ಶ್ರೀರೇಣುಕಾಚಾರ್ಯನನ್ನು ಕುರಿತು— ಆ ದೇವಾಲಯದಲ್ಲಿದ್ದ ಸಮಸ್ತಜನರು ಆಶ್ಚರ್ಯದಿಂದೊಡಗೂಡಿ ನಮಸ್ಕರಿಸುವಂಥ ವರಾಗಿ, ಎಲೈ ಮಹನೀಯನೇ! ನೀನು ಯಾರು ? ಎಂದು ಪ್ರಶ್ನಮಾಡಿದರು. ॥೩-೪-೫-೬-೭-೮-೯ ॥ ಶಿವಾದ್ವೈತಮಹಾನಂದದಲ್ಲಿ ಲೀನನಾದವನೂ, ಪರಮೇಶ್ವರನ ಪಾರ್ಶ್ವವರ್ತಿಯೂ ಆದ ಶ್ರೀರೇಣುಕಗಣೇಶ್ವರನು ಆ ಜನರನ್ನು ಕುರಿತು, ಈ ರೀತಿಯಾಗಿ ನುಡಿದನು. ॥೧೦॥ ಎಲೈ, ಜನಗಳಿರಾ! ನಾನು ಶ್ರೀಪರಮೇಶ್ವರನ ಅಪ್ಪಣೆಯಮೇರೆಗೆ ಪರಮಪವಿತ್ರವಾದೀ ಶಿವಕ್ಷೇತ್ರದಲ್ಲಿ ವಿರಾಜಿಸುತ್ತಿರುವ ಈ ಶಿವ ಲಿಂಗದಿಂದ ಅವತರಿಸಿದೆನು. ನನ್ನ ಹೆಸರು "ರೇವಣಸಿದ್ಧ" ಎಂದಿರುವುದು. ನಾನು ಸಿದ್ಧರ ಸಮುದಾಯಕ್ಕೆಲ್ಲ ಅಧಿಪತಿಯಾಗಿದ್ದೇನೆ. ನಾನು ಈ ಲೋಕದಲ್ಲಿ ಸ್ವತಂತ್ರನಾಗಿದ್ದೇನೆ; ಮತ್ತು ಶಿವಾದ್ವೈತಸಿದ್ಧಾಂತವನ್ನು ರಕ್ಷಿಸುವವನಾಗಿದ್ದೇನೆ;

ಇತ್ಯುಕ್ತ್ವಾ ಪಶ್ಯತಾಂ ತೇಷಾಂ ವಿಷಯಸ್ಥಿರಚಕ್ಷುಷಾಂ ।
ಉತ್ಥಾಯ ವ್ಯೋಮಮಾರ್ಗೇಣ ಮಲಯಾದ್ರಿಮುಪಾಗಮತ್ ॥೧೨॥

ನವಚಂದನಕಾಂತಾರಕಂದಲನ್ಮಂದಮಾರುತಂ ।
ಅಭಂಗುರಭುಜಂಗಸ್ತ್ರೀಸಂಗೀತರಸಸಂಕುಲಂ ॥೧೩॥

ಕರಿಪೋತಕರಾಕೃಷ್ಟಸ್ಫುರದೇಲಾತಿವಾಸಿತಂ ।
ವರಾಹದಂಷ್ಟ್ರಿಕಾಧ್ವಸ್ತಮುಸ್ತಾಸುರಭಿಕಂದರಂ ॥೧೪॥

ಪಟೀರದಲಪರ್ಯಂಕಪ್ರಸುಪ್ತವ್ಯಾಧದಂಪತಿಂ ।
ಮಾಧವೀಮಲ್ಲಿಕಾಜಾತೀಮಂಜರೀರೇಣುರಂಜಿತಂ ॥೧೫॥

ತತ್ರ ಕುತ್ರಚಿದಾಭೋಗೇ ಸರ್ವರ್ತುಕುಸುಮದ್ರುಮೇ ।
ಅಪಶ್ಯದಾಶ್ರಮಂ ದಿವ್ಯಮಗಸ್ತ್ಯಸ್ಯ ಮಹಾಮುನೇಃ ॥೧೬॥

---

ಎಂದು ನುಡಿದು, ಆ ಜನರು ಅನಿಮಿಷದೃಷ್ಟಿಯಿಂದ ನೋಡುತ್ತಿರಲು, ಗಗನಮಾರ್ಗದಿಂದ ಮಲಯಪರ್ವತವನ್ನು ಕುರಿತು ಪ್ರಯಾಣಮಾಡಿದನು. ॥ ೧೧-೧೨ ॥

## ಮಲಯಪರ್ವತದ ವರ್ಣನೆ.

ಆ ಮಲಯಪರ್ವತವು ನೂತನವಾದ ಶ್ರೀಗಂಧದ ವನದಲ್ಲಿ ಸಂಚರಿಸುತ್ತಿರುವ ಮಂದಮಾರುತದಿಂದ ಕೂಡಿರುವುದಾಗಿಯೂ, ಹೆಣ್ಣು ಸರ್ಪಗಳ ಗಾನರಸದಿಂದ ವ್ಯಾಪ್ತವಾದುದಾಗಿಯೂ, ಆನೆಯ ಮರಿಗಳ ಸೊಂಡಿಲುಗಳಿಂದ ಎಳೆಯಲ್ಪಟ್ಟ ಯಾಲಕ್ಕಿಯ ಬಳ್ಳಿಗಳಿಂದ ಬಹುಸುಗಂಧವುಳ್ಳುದಾಗಿಯೂ, ಕಾಡುಹಂದಿಗಳ ಕೋರೆಗಳಿಂದ ನಾಶಮಾಡಲ್ಪಟ್ಟ ಜೇಕಿನಗಡ್ಡೆಗಳಿಂದ ಸುಗಂಧಿತವಾದ ಗವಿಗಳುಳ್ಳುದಾಗಿಯೂ, ಚಂದನವೃಕ್ಷದ ಎಲೆಗಳಿಂದ ರಚಿಸಲ್ಪಟ್ಟ ಮಂಚದಲ್ಲಿ ಮಲಗಿದ ವ್ಯಾಧದಂಪತಿಗಳಿಂದ ಕೂಡಿದುದಾಗಿಯೂ, ಮಾಧವೀಕುಸುಮ-ಮಲ್ಲಿಕಾ (ಮಲ್ಲಿಗೆ) ಕುಸುಮ-ಜಾಜೀಕುಸುಮಗಳ ಗೊಂಚಲುಗಳಿಂದ ಹೊರಹೊರಟ ಧೂಳಿಯಿಂದ ಸುಗಂಧಿತವಾಗಿಯೂ ಪರಿಶೋಭಿಸುತ್ತಿರುವುದು. ॥೧೩-೧೪-೧೫॥

## ಅಗಸ್ತ್ಯಮಹರ್ಷಿಯ ಆಶ್ರಮದ ವರ್ಣನೆ.

ವಸಂತಾದಿಷಡೃತುಗಳಲ್ಲಾಗತಕ್ಕ ಸಕಲವಿಧಪುಷ್ಪಗಳಿಂದ ಯುಕ್ತವಾದ ವೃಕ್ಷಗಳಿಂದ ಪರಿಶೋಭಿಸುತ್ತಿರುವ ಆ ಮಲಯಪರ್ವತದ ಒಂದಾನೊಂದು ಪ್ರದೇಶದಲ್ಲಿ, ಶ್ರೀಜಗದ್ಗುರುರೇಣುಕಾಚಾರ್ಯನು ಅಗಸ್ತ್ಯಮಹರ್ಷಿಯ ಭವ್ಯವಾದ ಆಶ್ರಮವನ್ನು

ಮಂದಾರಚಂದನಪ್ರಾಯೈರ್ಮಂಡಿತಂ ತರುಮಂಡಲೈಃ ।
ಶಾಖಾಶಿಖರಸಂಲೀನತಾರಕಾಗಣಕೋರಕೈಃ ॥೧೭॥
ಮುನಿಕನ್ಯಾಕರಾನೀತಕಲಶಾಂಬುವಿವರ್ಧಿತೈಃ ।
ಆಲವಾಲಜಲಾಸ್ವಾದಮೋದಮಾನಮೃಗೀಗಣೈಃ ॥೧೮॥
ಹೇಮಾರವಿಂದನಿಷ್ಯಂದಮಕರಂದಸುಗಂಧಿಭಿಃ ।
ಮರಾಲಾಲಾಪವಾಚಾಲವೀಚಿಮಾಲಾಮನೋಹರೈಃ ॥೧೯॥
ಇಂದೀವರವರಜ್ಯೋತಿರಂಧೀಕೃತಹರಿನ್ಮುಖೈಃ ।
ಲೋಪಾಮುದ್ರಾಪದನ್ಯಾಸಚರಿತಾರ್ಥತಟಾಂಕಿತೈಃ ॥೨೦॥
ಹಾರನೀಹಾರಕರ್ಪೂರಹರಹಾಸಾಮಲೋದಕೈಃ ।
ನಿತ್ಯನೈಮಿತ್ತಿಕಸ್ನಾನನಿಯಮಾರ್ಥೈಸ್ತಪಸ್ವಿನಾಂ ॥೨೧॥
ಪ್ರಕೃಷ್ಟಮಣಿಸೋಪಾನೈಃ ಪರಿವೀತಂ ಸರೋವರೈಃ ।
ವಿಮುಕ್ತಸತ್ತ್ವವೈರಸ್ಯಂ ಬ್ರಹ್ಮಲೋಕಮಿವಾಪರಂ ॥೨೨॥

---

ನೋಡಿದನು. ॥೧೬॥ ಆ ಆಶ್ರಮವು ಟೊಂಗೆಗಳ ಅಗ್ರಭಾಗಗಳಲ್ಲಿ ನಕ್ಷತ್ರಸಮೂಹದಂತಿರುವ ಮೊಗ್ಗೆಗಳಿಂದ ಕೂಡಿದವುಗಳಾಗಿಯೂ, ಮುನಿಕನ್ಯೆಯರ ಹಸ್ತದಿಂದೆರೆದ ನೀರಿನಿಂದ ಬೆಳೆದವುಗಳಾಗಿಯೂ, ಪಾತಿ (ಮಡಿ) ಗಳಲ್ಲಿ ನಿಂತಿರುವ ನೀರನ್ನು ಕುಡಿದು ಸಂತೋಷದಿಂದಿರುವ ಹೆಣ್ಣುಜಿಗರೆಗಳ ಗುಂಪಿನಿಂದ ಕೂಡಿದವುಗಳಾಗಿಯೂ ಇರುವ ವೃಕ್ಷಗಳ ಸಮುದಾಯದಿಂದ ಅಲಂಕೃತವಾಗಿದ್ದಿತು. ॥ ೧೭-೧೮ ॥ ಸುವರ್ಣಕಮಲಗಳಿಂದ ಸೋರುತ್ತಿರುವ ಮಕರಂದದಿಂದ ಸುಗಂಧವಿಶಿಷ್ಟವಾದುವುಗಳೂ, ರಾಜಹಂಸಗಳ ಮಧುರಧ್ವನಿಯಿಂದ ಶಬ್ದಾಯಮಾನವಾದ ತರಂಗಗಳ ಪಂಕ್ತಿಯಿಂದ ಮನೋಹರವಾದುವುಗಳೂ ॥ ೧೯ ॥ ನೀಲಕಮಲಗಳ ಕಾಂತಿಯಿಂದ ದಶದಿಕ್ಕುಗಳನ್ನು ಅಂಧಕಾರವಿಶಿಷ್ಟವನ್ನಾಗಿ ಮಾಡಿದುವುಗಳೂ, ಅಗಸ್ತ್ಯ ಮಹರ್ಷಿಯ ಧರ್ಮಪತ್ನಿಯಾದ ಲೋಪಾಮುದ್ರೆಯ ಚರಣಸಂಚರಣದಿಂದ ಕೃತಾರ್ಥವಾದ ದಂಡೆಗಳುಳ್ಳುವುಗಳೂ ॥೨೦॥ ಮುತ್ತಿನಸರ-ಮಂಜಿನಗಡ್ಡೆ-ಕರ್ಪೂರ-ಶಿವನ ಮಂದಹಾಸ ಇವುಗಳಂತೆ ಅತ್ಯಂತಶುಭ್ರವಾದ ಉದಕವುಳ್ಳುವುಗಳೂ, ತಪಸ್ವಿಗಳ ನಿತ್ಯನೈಮಿತ್ತಿಕಸ್ನಾನಕ್ಕಾಗಿ ನಿಯಮಿತವಾದುವುಗಳೂ ॥೨೧॥ ಶ್ರೇಷ್ಠವಾದ ರತ್ನಗಳಿಂದ ವಿರಚಿತವಾದ ಸೋಪಾನವುಳ್ಳುವುಗಳೂ ಆದ ಸರೋವರಗಳಿಂದ ಆವರಿಸಲ್ಪಟ್ಟಿದ್ದೂ, ನಾನಾವಿಧಪ್ರಾಣಿಗಳ ಪರಸ್ಪರವೈರಭಾವದಿಂದ ದೂರೀಕೃತ

ಹೂಯಮಾನಾಜ್ಯಸಂತಾನಧೂಮಗಂಧಿಮಹಾಸ್ಥಲಂ ।
ಶುಕಸಂಸತ್ಸಮಾರಬ್ಧಶ್ರುತಿಶಾಸ್ತ್ರೋಪಬೃಂಹಣಂ ॥೨೩॥

ತಸ್ಯ ಮಧ್ಯೇ ಸಮಾಸೀನಂ ಮೂಲೇ ಚಂದನಭೂರುಹಃ ।
ಸುಕುಮಾರದಲಚ್ಛಾಯಾವಾರಿತಾದಿತ್ಯತೇಜಸಃ ॥೨೪॥

ತಡಿತ್ಪಿಂಗಜಟಾಭಾರೈಸ್ತ್ರಿಪುಂಡ್ರಾಂಕಿತಮಸ್ತಕೈಃ ।
ಭಸ್ಮೋದ್ಧೂಲಿತಸರ್ವಾಂಗೈಃ ಸ್ಫುರದ್ರುದ್ರಾಕ್ಷಭೂಷಣೈಃ ॥೨೫॥

ನವವಲ್ಕಲವಾಸೋಭಿರ್ನಾನಾನಿಯಮಧಾರಿಭಿಃ ।
ಪರಿವೀತಂ ಮುನಿಗಣೈಃ ಪ್ರಮಥೈರಿವ ಶಂಕರಂ ॥೨೬॥

ಸಮುಜ್ಜ್ವಲಜ್ಜಟಾಜಾಲೈಸ್ತಪಃಪಾದಪಪಲ್ಲವೈಃ ।
ಸ್ಫುರತ್ಸೌದಾಮಿನೀಕಲ್ಪೈರ್ಜ್ವಾಲಾಜಾಲೈರಿವಾನಲಂ ॥೨೭॥

ವಿಶುದ್ಧಭಸ್ಮಕೃತಯಾ ತ್ರಿಪುಂಡ್ರಾಂಕಿತರೇಖಯಾ ।
ತ್ರಿಸ್ರೋತಸೇವ ಸಂಬದ್ಧಶಿಲಾಭಾಗಂ ಹಿಮಾಚಲಂ ॥೨೮॥

---

ವಾದುದೂ, ಎರಡನೆಯ ಬ್ರಹ್ಮಲೋಕದಂತೊಪ್ಪುತ್ತಿರುವುದೂ ॥೨೨॥ ಯಜ್ಞದಲ್ಲಿ ಹವನಮಾಡತಕ್ಕ ತುಪ್ಪದಿಂದ ಉತ್ಪನ್ನವಾದ ಹೊಗೆಯಿಂದ ಸುಗಂಧಿತವಾದ ಮಹಾಸ್ಥಲವುಳ್ಳುದೂ, ಗಿಣಿಗಳ ಸಮೂಹದಿಂದ ಮಾಡಲ್ಪಡುತ್ತಿರುವ ವೇದವಿಚಾರ ಶಾಸ್ತ್ರಾರ್ಥವಿಚಾರಗಳುಳ್ಳುದೂ ಆಗಿ ವಿರಾಜಿಸುತ್ತಿದ್ದಿತು. ॥೨೩॥

### ಅಗಸ್ತ್ಯಮಹರ್ಷಿಯ ವರ್ಣನೆ.

ಆ ಆಶ್ರಮದ ಮಧ್ಯದಲ್ಲಿರುವ ಕೋಮಲವಾದ ಎಲೆಗಳ ನೆರಳಿನಿಂದ ಸೂರ್ಯರಶ್ಮಿಯನ್ನು ನಿವಾರಿಸುತ್ತಿದ್ದ ಶ್ರೀಗಂಧವೃಕ್ಷದ ಬುಡದಲ್ಲಿ ಕುಳಿತಿರುವವನೂ ॥೨೪॥ ಮಿಂಚಿನಂತೆ ಪಿಂಗಲವರ್ಣವುಳ್ಳ ಜಡೆಗಳಿಂದ ಯುಕ್ತರಾದವರೂ, ಮಸ್ತಕದಲ್ಲಿ ಭಸ್ಮತ್ರಿಪುಂಡ್ರವನ್ನು ಧರಿಸಿರುವವರೂ, ಸರ್ವಾವಯವಗಳಲ್ಲಿ ಭಸ್ಮೋದ್ಧೂಲನವನ್ನು ಮಾಡಿಕೊಂಡವರೂ, ಪ್ರಕಾಶಮಾನವಾದ ರುದ್ರಾಕ್ಷಗಳೇ ಆಭರಣವಾಗುಳ್ಳವರೂ ॥೨೫॥ ನೂತನವಾದ ನಾರುಬಟ್ಟೆಗಳನ್ನುಟ್ಟುಕೊಂಡವರೂ, ನಾನಾವ್ರತಧಾರಿಗಳೂ ಆದ ಮುನಿಗಳಿಂದ, ಪ್ರಮಥರಿಂದ ಪರಮೇಶ್ವರನು ಆವೃತನಾದಂತೆ ಆವೃತನಾದವನೂ ॥೨೬॥ ಮಿಂಚಿಗೆ ಸಮಾನವಾದ ಜ್ವಾಲಾಮಾಲೆಯಿಂದ ಅಗ್ನಿಯು ಶೋಭಿಸುತ್ತಿರುವಂತೆ ಪ್ರಕಾಶಮಾನವಾದ ಜಟಾಜಾಲದಿಂದ ಶೋಭಿಸುವವನೂ ॥೨೭॥ ಗಂಗಾನದಿಯ ಮೂರು ಪ್ರವಾಹಗಳಿಂದ ಕೂಡಿದ ಶಿಲಾಪ್ರದೇಶ

ಭಸ್ಮಾಲಂಕೃತಸರ್ವಾಂಗಂ ಶಶಾಂಕಮಿವ ಭೂಗತಂ ।
ವಸಾನಂ ವಲ್ಕಲಂ ನವ್ಯಂ ಬಾಲಾತಪಸಮಪ್ರಭಂ ॥೨೯॥

ವಡವಾಗ್ನಿಶಿಖಾಜಾಲಸಮಾಲೀಢಮಿವಾರ್ಣವಂ ।
ಸರ್ವಾಸಾಮಪಿ ವಿದ್ಯಾನಾಂ ಸಮುದಾಯನಿಕೇತನಂ ॥೩೦॥

ನ್ಯಕ್ಕೃತಪ್ರಾಕೃತಾಹಂತಂ ನಿರೂಢಶಿವಭಾವನಂ ।
ತೃಣೀಕೃತಜಗಜ್ಜಾಲಂ ಸಿದ್ಧೀನಾಮುದಯಸ್ಥಲಂ ॥೩೧॥

ಮೋಹಾಂಧಕಾರತಪನಂ ಮೂಲಬೋಧಮಹೀರುಹಂ ।
ದದರ್ಶ ಸ ಮಹಾಯೋಗೀ ಮುನಿಂ ಕಲಶಸಂಭವಂ ॥೩೨॥

ತಮಾಗತಂ ಮಹಾಸಿದ್ಧಂ ಸಮೀಕ್ಷ್ಯ ಕಲಶೋದ್ಭವಃ ।
ಗಣೇಂದ್ರಂ ರೇಣುಕಾಭಿಖ್ಯಂ ವಿವೇದ ಜ್ಞಾನಚಕ್ಷುಷಾ ॥
ತಸ್ಯಾನುಭಾವಂ ವಿಜ್ಞಾಯ ಸಹಸೈವ ಸಮುತ್ಥಿತಃ ॥೩೩॥

---

ದಿಂದ ಹಿಮವತ್ಪರ್ವತವು ಶೋಭಿಸುತ್ತಿರುವಂತೆ, ಅತ್ಯಂತಶುಭ್ರವಾದ ಭಸ್ಮದಿಂದ ವಿರಚಿತವಾದ ಮೂರು ರೇಖೆಗಳಿಂದ ಶೋಭಿಸುತ್ತಿರುವವನೂ ॥೨೮॥ ಭಸ್ಮದಿಂದ ಅಲಂಕೃತವಾದ ಸರ್ವಾವಯವಗಳುಳ್ಳವನೂ, ಭೂಮಿಗವತರಿಸಿದ ಚಂದ್ರನಂತಿರುವವನೂ, ಹೊಸನಾರುಬಟ್ಟೆಯನ್ನುಟ್ಟುಕೊಂಡವನೂ, ಹೊಬಿಸಿಲಿಗೆ ಸಮಾನವಾದ ಕಾಂತಿಯುಳ್ಳವನೂ ॥೨೯॥ ವಡವಾಗ್ನಿಯ ಜ್ವಾಲಾಜಾಲದಿಂದ ವ್ಯಾಪ್ತವಾದ ಸಮುದ್ರದಂತಿರುವವನೂ, ಸಮಸ್ತವಿದ್ಯೆಗಳಿಗೆ ಮಂದಿರಸ್ವರೂಪನೂ ॥೩೦॥ ಪ್ರಾಕೃತಶರೀರಾಹಂಕಾರವನ್ನು ತಿರಸ್ಕರಿಸಿದವನೂ, ಶಿವಭಾವದಲ್ಲಿ ಲೀನನಾದವನೂ, ಜಗಜ್ಜಾಲವನ್ನು ತೃಣೀಕರಿಸಿದವನೂ, ಸಮಸ್ತಸಿದ್ಧಿಗಳಿಗೆ ಉತ್ಪತ್ತಿಸ್ಥಾನಭೂತನೂ ॥೩೧॥ ಮೋಹವೆಂಬ ಅಂಧಕಾರಕ್ಕೆ ಸೂರ್ಯಸ್ವರೂಪನೂ, ಸ್ವಸ್ವರೂಪ ಜ್ಞಾನಕ್ಕೆ ಕಲ್ಪವೃಕ್ಷಸದೃಶನೂ ಆದ ಅಗಸ್ತ್ಯಮಹರ್ಷಿಯನ್ನು ಶ್ರೀರೇಣುಕಗಣಾಧೀಶ್ವರನು ಕಂಡನು. ॥೩೨॥ ಅಗಸ್ತ್ಯನು, ತನ್ನ ಆಶ್ರಮಕ್ಕೆ ಆಗಮಿಸಿದ ಸಿದ್ಧಕುಲಪತಿಯನ್ನು ನೋಡಿ, ಜ್ಞಾನನೇತ್ರದಿಂದ ಈತನು ಶ್ರೀರೇಣುಕಗಣಾಧೀಶ್ವರನೆಂದು ತಿಳಿದುಕೊಂಡನಲ್ಲದೆ, ಈತನ ಮಹಿಮೆಯನ್ನು ತಿಳಿದು ಕೂಡಲೆ ಎದ್ದು ನಿಂತನು. ॥೩೩॥ ಲೋಪಾಮುದ್ರೆಯ ಹಸ್ತದಿಂದ ತರಲ್ಪಟ್ಟ ಪರಮಪವಿತ್ರವಾದ

ಲೋಪಾಮುದ್ರಾಕರಾನೀತೈರುದಕೈರತಿಪಾವನೈಃ ।
ಪಾದೌ ಪ್ರಕ್ಷಾಲಯಾಮಾಸ ಸ ತಸ್ಯ ಶಿವಯೋಗಿನಃ ॥೩೪॥

ಸಂಪೂಜ್ಯ ತಂ ಯಥಾಶಾಸ್ತ್ರಂ ತನ್ನಿಯೋಗಪುರಸ್ಸರಂ ।
ಮುನಿರ್ವಿನಯಸಂಪನ್ನೋ ನಿಷಸಾದಾಸನಾಂತರೇ ॥೩೫॥

ಸಮಾಸೀನಂ ಮುನಿವರಂ ಸರ್ವತೇಜಸ್ವಿನಾಂ ವಿಭುಂ ।
ಉವಾಚ ಶಾಂತಯಾ ವಾಚಾ ರೇವಣಃ ಸಿದ್ಧಶೇಖರಃ ॥೩೬॥

ನಿರ್ವಿಘ್ನಂ ವರ್ತಸೇ ಕಿಂ ನು ನಿತ್ಯಾ ತೇ ನಿಯಮಕ್ರಿಯಾ ? ।
ಅಥವಾಽಗಸ್ತ್ಯ ತೇಜಸ್ವಿನ್ ಕುತಃ ಸ್ಯುಸ್ತೇಽಂತರಾಯಕಾಃ ॥೩೭॥

ವಿಂಧ್ಯೋ ನಿರುದ್ಧೋ ಭವತಾ ವಿಶ್ವೋಲ್ಲಂಘನವಿಭ್ರಮಃ ।
ನಹುಷೋ ರೋಷಲೇಶಾತ್ತೇ ಸದ್ಯಃ ಸರ್ಪತ್ವಮಾಗತಃ ॥೩೮॥

ಆಚಾಂತಾ ಭವತಾ ಪೂರ್ವಂ ಪಂಕಶೇಷಾಃ ಪಯೋಧಯಃ ।
ಜೀರ್ಣಸ್ತೇ ಜಾಠರೇ ವಹ್ನೌ ದೃಪ್ತೋ ವಾತಾಪಿದಾನವಃ ॥೩೯॥

---

ಉದಕದಿಂದ ಅಗಸ್ತ್ಯಮಹರ್ಷಿಯು ಶಿವಯೋಗಿಶಿಖಾಮಣಿಯಾದ ಶ್ರೀರೇಣುಕಾಚಾರ್ಯನ ಪಾದಕಮಲಗಳನ್ನು ತೊಳೆದು ಶಾಸ್ತ್ರವಿಧಿಗನುಸಾರವಾಗಿ ಪೂಜಿಸಿದನು. ಬಳಿಕ ಅಸಾಧಾರಣವಿನಯದಿಂದ ಕೂಡಿದ ಅಗಸ್ತ್ಯಮಹರ್ಷಿಯು ಶ್ರೀರೇಣುಕಾಚಾರ್ಯನ ಅಪ್ಪಣೆಯಮೇರೆಗೆ ಬೇರೆ ಆಸನದಲ್ಲಿ ಕುಳಿತನು. ॥೩೪-೩೫॥ ಸಿದ್ಧಕುಲಶಿಖಾಮಣಿಯಾದ ಶ್ರೀರೇವಣಸಿದ್ಧನು ಸಮಸ್ತತೇಜಸ್ವಿಪುರುಷರಲ್ಲಿ ಅಗ್ರಗಣ್ಯನಾದ ಆ ಮುನಿಶ್ರೇಷ್ಠನನ್ನು ಕುರಿತು ಶಾಂತವಾಣಿಯಿಂದ ಈ ರೀತಿಯಾಗಿ ನುಡಿದನು. ॥೩೬॥ ಎಲೈ, ತೇಜಸ್ವಿಯಾದ ಅಗಸ್ತ್ಯನೇ! ಸುಖವಾಗಿ ಇರುವೆಯಾ ? ನಿನ್ನ ನಿತ್ಯನಿಯಮಕ್ರಿಯೆಗಳು ಸರಿಯಾಗಿ ನಡೆಯುತ್ತಿವೆಯೋ ? ಅಥವಾ ನಿನಗೆ ವಿಘ್ನಗಳು ಎಲ್ಲಿಂದ ಬರಬಹುದು ? ॥೩೭॥ ಅಸಾಧ್ಯವಾಗಿ ಬೆಳೆಯುತ್ತ ಬೆಳೆಯುತ್ತ ಜಗತ್ತಿನ ಉಲ್ಲಂಘನದಲ್ಲಿ ಆಸಕ್ತವಾದ ವಿಂಧ್ಯಪರ್ವತವನ್ನು ನೀನು ಭೂಮಿಯಲ್ಲಿ ಮಲಗಿಸಿಬಿಟ್ಟೆ; ನಹುಷಚಕ್ರವರ್ತಿಯು ನಿನ್ನ ಸ್ವಲ್ಪ ಕೋಪಕ್ಕೀಡಾಗಿ ಕೂಡಲೆ ಸರ್ಪಶರೀರವನ್ನು ಧರಿಸಿದನು. ॥೩೮॥ ಪೂರ್ವದಲ್ಲಿ ಸಮಸ್ತಸಮುದ್ರಗಳು ನಿನ್ನಿಂದ ಕೆಸರು ಮಾತ್ರ ಉಳಿಯುವಂಥವುಗಳಾಗಿ ಪಾನಮಾಡಲ್ಪಟ್ಟವು. ಮದೋನ್ಮತ್ತನಾದ ವಾತಾಪಿನಾಮಕ ದೈತ್ಯನು ನಿನ್ನ ಜಠರಾಗ್ನಿಯಲ್ಲಿ ಸಿಲುಕಿ ಬೆಂದುಹೋದನು. ॥೩೯॥

ಏವಂವಿಧಾನಾಂ ಚಿತ್ರಾಣಾಂ ಸರ್ವಲೋಕಾತಿಶಾಯಿನಾಂ ।
ಕೃತ್ಯಾನಾಂ ತು ಭವಾನ್ ಕರ್ತಾ ಕಸ್ತ್ವೇಽಗಸ್ತ್ಯ ಸಮಪ್ರಭಃ ॥೪೦॥
ಶಿವಾದ್ವೈತಪರಾನಂದಪ್ರಕಾಶನಪರಾಯಣಂ ।
ಭವಂತಮೇಕಂ ಶಂಸಂತಿ ಪ್ರಕೃತ್ಯಾ ಸಂಗವರ್ಜಿತಂ ॥೪೧॥
ಪುರಾ ಹೈಮವತೀಸೂನುರವದತ್ತೇ ಷಡಾನನಃ ।
ಶಿವಧರ್ಮೋತ್ತರಂ ನಾಮ ಶಾಸ್ತ್ರಮೀಶ್ವರಭಾಷಿತಂ ॥೪೨॥
ಭಕ್ತಿಃ ಶೈವೀ ಮಹಾಘೋರಸಂಸಾರಭಯಹಾರಿಣೀ ।
ತ್ವಯಾ ರಾಜನ್ವತೀ ಲೋಕೇ ಜಾತಾಽಗಸ್ತ್ಯಮಹಾಮುನೇ ॥೪೩॥
ಇತಿ ತಸ್ಯ ವಚಃ ಶ್ರುತ್ವಾ ಸಿದ್ಧಸ್ಯ ಮುನಿಪುಂಗವಃ ।
ಗಂಭೀರಗುಣಯಾ ವಾಚಾ ಬಭಾಷೇ ಭಕ್ತಿಪೂರ್ವಕಂ ॥೪೪॥
ಅಹಮೇವ ಮುನೀಂದ್ರಾಣಾಂ ಲಾಲನೀಯೋಽಸ್ಮಿ ಸರ್ವದಾ ।
ಭವದಾಗಮಸಂಪತ್ತಿರ್ಮಾಂ ವಿನಾ ಕಸ್ಯ ಸಂಭವೇತ್ ? ॥೪೫॥

---

ಎಲೈ, ಅಗಸ್ತ್ಯನೇ! ಈ ಪ್ರಕಾರವಾಗಿರುವ ಅಲೌಕಿಕವಾದ ವಿಚಿತ್ರಕಾರ್ಯಗಳನ್ನು ನೀನು ಮಾಡಿರುವೆ; ಆದುದರಿಂದ ನಿನಗೆ ಈ ಭೂಲೋಕದಲ್ಲಿ ಸಮಾನರು ಯಾರೂ ಇರುವುದಿಲ್ಲ. ॥೪೦॥ ಈ ಲೋಕದಲ್ಲಿರುವ ಜನರು ನಿನ್ನೊಬ್ಬನನ್ನೇ ಶಿವಾದ್ವೈತಾನುಭವದಿಂದುಂಟಾದ ಆನಂದವನ್ನು ಪ್ರಕಾಶಪಡಿಸುವುದರಲ್ಲಿ ಆಸಕ್ತನನ್ನಾಗಿಯೂ, ಪ್ರಕೃತಿಸಂಬಂಧರಹಿತನನ್ನಾಗಿಯೂ ಹೊಗಳುತ್ತಿರುವರು. ॥೪೧॥ ಪೂರ್ವದಲ್ಲಿ ಪಾರ್ವತೀಪುತ್ರನಾದ ಷಣ್ಮುಖನು ನಿನಗೆ ಶಿವಪ್ರೋಕ್ತವಾದ ಶಿವಧರ್ಮೋತ್ತರನಾಮಕಶಾಸ್ತ್ರವನ್ನು ಉಪದೇಶಿಸಿದನು. ॥೪೨॥ ಎಲೈ, ಅಗಸ್ತ್ಯಮಹರ್ಷಿಯೇ! ಘೋರವಾದ ಸಂಸಾರಭಯವನ್ನು ನಾಶಮಾಡತಕ್ಕಂಥ ಶಿವಭಕ್ತಿಯು ನಿನ್ನಿಂದಲೇ ಈ ಲೋಕದಲ್ಲಿ ಪ್ರಕಾಶಿಸುವಂಥದಾಯಿತು. ॥೪೩॥ ಈ ಪ್ರಕಾರವಾಗಿ ನುಡಿದ ಶ್ರೀರೇಣುಕಗಣಾಧೀಶ್ವರನ ಮಾತುಗಳನ್ನು ಕೇಳಿ, ಅಗಸ್ತ್ಯಮಹರ್ಷಿಯು ಅತ್ಯಂತಭಕ್ತಿಪೂರ್ವಕವಾಗಿ ಗಂಭೀರವಾಣಿಯಿಂದ ಈ ರೀತಿಯಾಗಿ ಮಾತನಾಡಿದನು. ॥೪೪॥

### ಅಗಸ್ತ್ಯಮಹರ್ಷಿಯ ವಿಜ್ಞಾಪನೆ.

ಎಲೈ, ಆಚಾರ್ಯನೇ! ನಿನ್ನ ಆಗಮನರೂಪವಾದ ಸಂಪತ್ತು ನನ್ನ ಹೊರತು ಇನ್ನಾರಿಗೆ ಸಂಭವಿಸುವುದು? ಆದುದರಿಂದಲೇ ಮುನಿಶ್ರೇಷ್ಠರಿಗೆಲ್ಲಾ ಯಾವಾಗಲೂ ನಾನೇ ಶ್ಲಾಘನೀಯನಾಗಿದ್ದೇನೆ. ॥೪೫॥ ನಿನ್ನ ದರ್ಶನದಿಂದೊದಗಿದ

ಸ್ಥಿರಮದ್ಯ ಶಿವಜ್ಞಾನಂ ಸ್ಥಿರಾ ಮೇ ತಾಪಸಕ್ರಿಯಾ ।
ಭವದ್ದರ್ಶನಪುಣ್ಯೇನ ಸ್ಥಿರಾ ಮೇ ಮುನಿರಾಜತಾ ॥೪೬॥

ಸಂಸಾರಸರ್ಪದಷ್ಟಾನಾಂ ಮೂರ್ಛಿತಾನಾಂ ಶರೀರಿಣಾಂ ।
ಕಟಾಕ್ಷಸ್ತವ ಕಲ್ಯಾಣಂ ಸಮುಜ್ಜೀವನಭೇಷಜಂ ॥೪೭॥

ಸಮಸ್ತಲೋಕಸಂದಾಹತಾಪತ್ರಯಮಹಾನಲಃ ।
ತ್ವತ್ಪದಾಂಬುಕಣಾಸ್ವಾದಾದುಪಶಾಮ್ಯತಿ ದೇಹಿನಾಂ ॥೪೮॥

ರೇಣುಕಂ ತ್ವಾಂ ವಿಜಾನಾಮಿ ಗಣನಾಥಂ ಶಿವಪ್ರಿಯಂ ।
ಅವತೀರ್ಣಮಿಮಾಂ ಭೂಮಿಂ ಮದನುಗ್ರಹಕಾಂಕ್ಷಯಾ ॥೪೯॥

ಭವಾದೃಶಾನಾಂ ಸಿದ್ಧಾನಾಂ ಪ್ರಬೋಧಧ್ವಸ್ತಜನ್ಮನಾಂ ।
ಪ್ರವೃತ್ತಿರೀದೃಶೀ ಲೋಕೇ ಪರಾನುಗ್ರಹಕಾರಿಣೀ ॥೫೦॥

ತ್ವನ್ಮುಖಾಚ್ಛ್ರೋತುಮಿಚ್ಛಾಮಿ ಸಿದ್ಧಾಂತಂ ಶ್ರುತಿಸಮ್ಮತಂ ।
ಸರ್ವಜ್ಞ ವದ ಮೇ ಸಾಕ್ಷಾಚ್ಛೈವಂ ಸರ್ವಾರ್ಥಸಾಧಕಂ ॥೫೧॥

---

ಪುಣ್ಯವಿಶೇಷದಿಂದ ಇಂದಿಗೆ ನನ್ನ 'ಶಿವಜ್ಞಾನವು ಸ್ಥಿರವಾಯಿತು. ಇಂದಿಗೆ ನನ್ನ ತಪಃಕ್ರಿಯೆಯು ಸ್ಥಿರವಾಯಿತು. ಇಂದಿಗೆ ನನ್ನ ಮುನಿಸಾರ್ವಭೌಮತ್ವವು ಸ್ಥಿರವಾಯಿತು. ॥೪೬॥ ಸಂಸಾರರೂಪವಾದ ಸರ್ಪದಿಂದ ಕಡಿಸಿಕೊಂಡು ಮೂರ್ಛಿತರಾಗಿರುವ ಮಾನವರಿಗೆ ನಿನ್ನ ಕಲ್ಯಾಣಕಟಾಕ್ಷವೇ ಸಂಜೀವನೌಷಧವಾಗಿದೆ. ॥೪೭॥ ಸಮಸ್ತಲೋಕಗಳನ್ನು ಸುಡತಕ್ಕ ಆಧ್ಯಾತ್ಮಿಕ-ಆಧಿಭೌತಿಕ-ಆಧಿದೈವಿಕತಾಪರೂಪವಾದ ಪ್ರಚಂಡಾಗ್ನಿಯು ನಿನ್ನ ಪಾದೋದಕದ ಒಂದು ಬಿಂದುಮಾತ್ರಸೇವನೆಯಿಂದಲೇ ಶಾಂತವಾಗುತ್ತದೆ. ॥೪೮॥ ಶಿವಪ್ರೀತಿಪಾತ್ರನೂ ಪ್ರಮಥಾಧಿಪತಿಯೂ ಆದ ಎಲೈ, ರೇಣುಕಗಣಾಧೀಶ್ವರನೇ! ನನ್ನನ್ನು ಅನುಗ್ರಹಿಸಬೇಕೆಂಬ ಅಭಿಲಾಷೆಯಿಂದ ನೀನು ಈ ಭೂಮಂಡಲದಲ್ಲಿ ಅವತರಿಸಿರುವೆ; ಎಂಬುದನ್ನು ಬಲ್ಲೆನು. ॥೪೯॥ ಶಿವಜ್ಞಾನದಿಂದ ಜನನಮರಣಗಳನ್ನು ನಾಶಮಾಡಿದ ನಿನ್ನಂಥ ಸಿದ್ಧಾಗ್ರೇಸರರ ಈ ರೀತಿಯಾದ ಸಂಚಾರವೇ ಮಾನವಪ್ರಾಣಿಗಳಿಗೆ ಅನುಗ್ರಹವನ್ನುಂಟುಮಾಡತಕ್ಕುದಾಗಿರುತ್ತದೆ. ॥೫೦॥ ಎಲೈ, ರೇಣುಕಾಚಾರ್ಯನೇ! ವೇದಸಮ್ಮತವಾದ ಸಿದ್ಧಾಂತಶಾಸ್ತ್ರವನ್ನು ನಿನ್ನ ಮುಖದಿಂದ ಕೇಳಬೇಕೆಂಬ ಇಚ್ಛೆಯುಳ್ಳವನಾಗಿದ್ದೇನೆ; ಆದುದರಿಂದ ಸರ್ವಜ್ಞಮೂರ್ತಿಯೇ! ಸರ್ವಾರ್ಥಸಾಧಕವಾದುದೂ, ಶಿವಸಂಬಂಧವಾದುದೂ,

ಸದ್ಯಃ ಸಿದ್ಧಿಕರಂ ಪುಂಸಾಂ ಸರ್ವಯೋಗೀಂದ್ರಸೇವಿತಂ ।
ದುರಾಚಾರ್ಯೈರನಾಘ್ರಾತಂ ಸ್ವೀಕೃತಂ ವೇದವೇದಿಭಿಃ ॥
ಶಿವಾತ್ಮೈಕ್ಯಮಹಾಬೋಧಸಂಪ್ರದಾಯಪ್ರವರ್ತಕಂ ॥೫೨॥

ಉಕ್ತ್ವಾ ಭವಾನ್ ಸಕಲಲೋಕಮಹೋಪಕಾರಂ
ಸಿದ್ಧಾಂತಸಂಗ್ರಹಮನಾದೃತಬಾಹ್ಯತಂತ್ರಂ ।
ಸದ್ಯಃ ಕೃತಾರ್ಥಯಿತುಮರ್ಹತಿ ದಿವ್ಯಯೋಗಿನ್
ನಾನಾಗಮಶ್ರವಣವರ್ತಿತಸಂಶಯಂ ಮಾಂ ॥೫೩॥

ಇತಿ ಶ್ರೀಸಿದ್ಧಾಂತಶಿಖಾಮಣೌ ಶ್ರೀರೇಣುಕಾಗಸ್ತ್ಯಸಂಭಾಷಣ
ಪ್ರಸಂಗೋ ನಾಮ

ಚತುರ್ಥಪರಿಚ್ಛೇದಃ ಪರಿಸಮಾಪ್ತಃ.

---

ತತ್ಕ್ಷಣವಲ್ಲಿ ಸಿದ್ಧಿಯನ್ನುಂಟುಮಾಡತಕ್ಕದ್ದೂ, ಸಮಸ್ತಯೋಗೀಂದ್ರರಿಂದ ಸೇವಿತವಾದುದೂ, ದುರಾಚಾರಿಗಳಿಂದ ಅನಾಘ್ರಾತವಾದುದೂ, ವೇದಜ್ಞರಿಂದ ಸ್ವೀಕೃತವಾದುದೂ, ಶಿವಜೀವೈಕ್ಯಮಹಾಜ್ಞಾನಸಂಪ್ರದಾಯಪ್ರವರ್ತಕವಾದುದೂ ಆದ ಸಿದ್ಧಾಂತಶಾಸ್ತ್ರವನ್ನು ನನಗೆ ಉಪದೇಶಮಾಡು. ॥೫೧-೫೨॥ ಎಲೈ, ಮಹಾಯೋಗಿಯೇ! ನಾನಾವಿಧವಾದ ಆಗಮಗಳ ಶ್ರವಣದಿಂದ ಸಂಶಯವಿಶಿಷ್ಟನಾದ ನನಗೆ ನೀನು ವೇದಬಾಹ್ಯತಂತ್ರಗಳನ್ನು ಖಂಡಿಸತಕ್ಕದ್ದೂ ಸಕಲಪ್ರಾಣಿವರ್ಗಕ್ಕೆ ಅನುಗ್ರಹವನ್ನುಂಟುಮಾಡತಕ್ಕದ್ದೂ ಆದ ಸಿದ್ಧಾಂತಶಾಸ್ತ್ರವನ್ನು ಉಪದೇಶಮಾಡಿ, ಸದ್ಯಃ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು. ॥೫೩॥

ಇಂತು ಶ್ರೀಸಿದ್ಧಾಂತಶಿಖಾಮಣಿಯಲ್ಲಿ ಶ್ರೀರೇಣುಕಾಗಸ್ತ್ಯ
ಸಂಭಾಷಣಾತ್ಮಕವಾದ

ನಾಲ್ಕನೆಯ ಪರಿಚ್ಛೇದವು ಪರಿಸಮಾಪ್ತವಾದುದು.

ಶ್ರೀಜಗದ್ಗುರುರೇಣುಕಾಚಾರ್ಯಃ ಪ್ರಸೀದತು.

# ಪಂಚಮಪರಿಚ್ಛೇದಃ

ಅಥಾಗಸ್ತ್ಯವಚಃ ಶ್ರುತ್ವಾ ರೇಣುಕೋ ಗಣನಾಯಕಃ ।
ಧ್ಯಾತ್ವಾ ಕ್ಷಣಂ ಮಹಾದೇವಂ ಸಾಂಬಮಾಹ ಸಮಾಹಿತಃ ॥೧॥
ಅಗಸ್ತ್ಯಮುನಿಶಾರ್ದೂಲ ಸಮಸ್ತಾಗಮಪಾರಗ ।
ಶಿವಜ್ಞಾನಕರಂ ವಕ್ಷ್ಯೇ ಸಿದ್ಧಾಂತಂ ಶೃಣು ಸಾದರಂ ॥೨॥
ಅಗಸ್ತ್ಯ ಬಹುಧಾ ಖ್ಯಾತಾಃ ಸಿದ್ಧಾಂತಾ ರುಚಿಭೇದತಃ ।
ಭಿನ್ನಾಚಾರಸಮಾಯುಕ್ತಾ ಭಿನ್ನಾರ್ಥಪ್ರತಿಪಾದಕಾಃ ॥೩॥
ಸಾಂಖ್ಯಂಯೋಗಃಪಾಂಚರಾತ್ರಂವೇದಾಃಪಾಶುಪತಂ ತಥಾ ।
ಏತಾನಿ ಮಾನಭೂತಾನಿ ನ ಹಂತವ್ಯಾನಿ ಯುಕ್ತಿಭಿಃ ॥೪॥

---

## ಐದನೆಯ ಪರಿಚ್ಛೇದವು.

### ಅಗಸ್ತ್ಯಮಹರ್ಷಿಗೆ ಉಪದೇಶ.

ವ್ಯಾಖ್ಯಾನ— ಪ್ರಮಥಾಧಿಪತಿಯಾದ ಶ್ರೀರೇಣುಕಾಚಾರ್ಯನು ಅಗಸ್ತ್ಯ ಮಹರ್ಷಿಯು ವಿಜ್ಞಾಪಿಸಿಕೊಂಡ ವಚನಗಳನ್ನೆಲ್ಲಾ ಕೇಳಿ, ಕ್ಷಣಕಾಲ ಏಕಾಗ್ರಚಿತ್ತ ನಾಗಿ ಶಕ್ತಿಸಮೇತನಾದ ಪರಶಿವನನ್ನು ಧ್ಯಾನಿಸಿ, ಉಪದೇಶಮಾಡಲು ಪ್ರಾರಂಭಿ ಸಿದನು. ॥೧॥ ಸರ್ವಾಗಮನಿಷ್ಣಾತನಾದ ಎಲೈ, ಅಗಸ್ತ್ಯಮಹರ್ಷಿಯೇ! ಶಿವಜ್ಞಾನ ವನ್ನುಂಟುಮಾಡತಕ್ಕ ಸಿದ್ಧಾಂತಶಾಸ್ತ್ರವನ್ನು ಉಪದೇಶಿಸುತ್ತೇನೆ; ಆದರಪೂರ್ವಕ ವಾಗಿ ಶ್ರವಣಮಾಡು. ॥೨॥ ಎಲೈ, ಅಗಸ್ತ್ಯನೇ! ಕಪಿಲಪತಂಜಲ್ಯಾದಿಮಹರ್ಷಿಗಳ ಪ್ರೀತಿವೈಚಿತ್ರ್ಯದಿಂದ ಭಿನ್ನಭಿನ್ನಾಚಾರಗಳಿಂದ ಯುಕ್ತವಾದುವುಗಳೂ, ಭಿನ್ನಭಿನ್ನಾ ರ್ಥಗಳನ್ನು ಪ್ರತಿಪಾದಿಸತಕ್ಕವುಗಳೂ ಆದ ಸಿದ್ಧಾಂತಗಳು ಅನೇಕವಾಗಿರುತ್ತವೆ. ॥೩॥ ಕಪಿಲಮಹರ್ಷಿಯಿಂದ ವಿರಚಿತವಾದ ಸಾಂಖ್ಯಶಾಸ್ತ್ರವು, ಪ್ರಕೃತಿ ಮತ್ತು ಪುರುಷ ಎಂಬ ಎರಡು ಪದಾರ್ಥಗಳನ್ನು ಪ್ರತಿಪಾದಿಸುವಂಥದಾಗಿ ಅನೀಶ್ವರವಾದಿಯಾಗಿ ರುವುದು. ಪತಂಜಲಿಮಹರ್ಷಿಯಿಂದ ವಿರಚಿತವಾದ ಯೋಗಶಾಸ್ತ್ರವು, ಅತ್ಯಂತ ಕಷ್ಟಕರಗಳಾದ ಯಮ - ನಿಯಮ - ಆಸನ-ಪ್ರಾಣಾಯಾಮ - ಪ್ರತ್ಯಾಹಾರ - ಧ್ಯಾನ -



ಶ್ರೀಜಗದ್ಗುರುರೇಣುಕಾಚಾರ್ಯರು ಅಗಸ್ತ್ಯಮಹರ್ಷಿಗಳಿಗೆ
ಶಿವಸಿದ್ಧಾಂತವನ್ನು ಪದೇಶಿಸುತ್ತಿರುವರು.

ವೇದಃ ಪ್ರಧಾನಂ ಸರ್ವೇಷಾಂ ಸಾಂಖ್ಯಾದೀನಾಂ ಮಹಾಮುನೇ ।
ವೇದಾನುಸರಣಾದೇಷಾಂ ಪ್ರಮಾಣಮಿತಿ ನಿಶ್ಚಿತಂ ॥೫॥
ಪಾಂಚರಾತ್ರಸ್ಯ ಸಾಂಖ್ಯಸ್ಯ ಯೋಗಸ್ಯಚ ತಥಾ ಮುನೇ ।
ವೇದೈಕದೇಶವರ್ತಿತ್ವಂ ಶೈವಂ ವೇದಮಯಂ ಮತಂ ॥೬॥
ವೇದೈಕದೇಶವರ್ತಿಭ್ಯಃ ಸಾಂಖ್ಯಾದಿಭ್ಯೋ ಮಹಾಮುನೇ ।
ಸರ್ವವೇದಾನುಸಾರಿತ್ವಾಚ್ಛೈವತಂತ್ರಂ ವಿಶಿಷ್ಯತೇ ॥೭॥
ಶೈವತಂತ್ರಮಿತಿ ಪ್ರೋಕ್ತಂ ಸಿದ್ಧಾಂತಾಖ್ಯಂ ಶಿವೋದಿತಂ ।
ಸರ್ವವೇದಾರ್ಥರೂಪತ್ವಾತ್ ಪ್ರಮಾಣಂ ವೇದವತ್ಸದಾ ॥೮॥

---

ಧಾರಣ-ಸಮಾಧಿಗಳೆಂಬ ಅಷ್ಟಾಂಗಗಳನ್ನು ಪ್ರತಿಪಾದಿಸುವಂಥದಾಗಿ, ಸೇಶ್ವರವಾದಿಯಾಗಿರುವುದು. ವಾಸುದೇವವಿರಚಿತವಾದ ಪಾಂಚರಾತ್ರಶಾಸ್ತ್ರವು, ವೈಷ್ಣವದೀಕ್ಷಾಂಗಭೂತತಪ್ತಮುದ್ರಾಧಾರಣಾದಿಕ್ರಿಯಾಪ್ರತಿಪಾದನದ್ವಾರಾ ಚಿತ್-ಅಚಿತ್-ಈಶ್ವರರೂಪಪದಾರ್ಥತ್ರಯವನ್ನು ಪ್ರತಿಪಾದಿಸುವುದಾಗಿರುವುದು. ಶಿವಪ್ರಣೀತವಾದ ಪಾಶುಪತಶಾಸ್ತ್ರವು, ಪಶು-ಪಾಶ-ಪತಿರೂಪಪದಾರ್ಥತ್ರಯವನ್ನು ಪ್ರತಿಪಾದಿಸುವುದಾಗಿರುವುದು. ಶಿವನ ಅಪ್ರಯತ್ನಸಿದ್ಧನಿಶ್ವಾಸರೂಪಋಗ್ಯಜುಃಸಾಮವೇದಗಳ ಪೂರ್ವಕಾಂಡಾನುಸಾರವಾಗಿ ಜೈಮಿನಿಮಹರ್ಷಿಯಿಂದ ವಿರಚಿತವಾಗಿರುವ ಪೂರ್ವಮೀಮಾಂಸಾಶಾಸ್ತ್ರವು, ಯಾಗಾದಿಕರ್ಮಗಳನ್ನು ಪ್ರತಿಪಾದಿಸುವಂಥದಾಗಿ, ಅನೀಶ್ವರವಾದಿಯಾಗಿರುವುದು. ಈ ಶಾಸ್ತ್ರಗಳೆಲ್ಲವೂ ಪ್ರಮಾಣಭೂತವಾಗಿರುವುವು. ಆದುದರಿಂದ ಇವುಗಳನ್ನು ಯುಕ್ತಿಪ್ರಯುಕ್ತಿಗಳಿಂದ ಖಂಡಿಸಬಾರದು. ॥೪॥ ಇಲ್ಲಿ ಹೇಳಿದ ಸಾಂಖ್ಯಾದಿಶಾಸ್ತ್ರಗಳಲ್ಲಿ ವೇದವು ಪ್ರಧಾನವಾದುದು. ಈ ಎಲ್ಲ ಶಾಸ್ತ್ರಗಳೂ ವೇದಗಳನ್ನನುನಸರಿಸಿ ವರ್ತಿಸುವುದರಿಂದ ಪ್ರಮಾಣಭೂತವಾಗಿರುವುವು. ॥೫॥ ಪಾಂಚರಾತ್ರಶಾಸ್ತ್ರವೂ, ಸಾಂಖ್ಯಶಾಸ್ತ್ರವೂ, ಯೋಗಶಾಸ್ತ್ರವೂ, ವೇದದ ಒಂದೊಂದು ಭಾಗದಲ್ಲಿರುವುವು; ಶೈವಶಾಸ್ತ್ರವು ವೇದಮಯವಾಗಿರುವುದು. ॥೬॥ ಎಲೈ, ಮಹರ್ಷಿಯೇ! ವೇದದ ಒಂದೊಂದು ಭಾಗದಲ್ಲಿರತಕ್ಕ ಸಾಂಖ್ಯಾದಿಶಾಸ್ತ್ರಗಳಿಗಿಂತಲೂ, ಸರ್ವವೇದಗಳನ್ನು ಅನುಸರಿಸುವ ಶೈವಶಾಸ್ತ್ರವು ವಿಶೇಷವಾಗಿ ಮಹತ್ತ್ವವುಳ್ಳುದಾಗಿರುವುದು. ॥೭॥ ಶಿವಪ್ರಣೀತವಾದ ಶೈವಶಾಸ್ತ್ರವು ಸಿದ್ಧಾಂತಶಾಸ್ತ್ರವೆಂದು ಹೇಳಿಸಿಕೊಳ್ಳುವುದು. ಈ ಸಿದ್ಧಾಂತಶಾಸ್ತ್ರವು ಸಮಸ್ತವೇದಾರ್ಥಮಯವಾಗಿರುವುದರಿಂದ, ಯಾವಾಗಲೂ ವೇದಗಳಂತೆ ಪ್ರಮಾಣಭೂತವಾಗಿರುವುದು. ॥೮॥

ಆಗಮಾ ಬಹುಧಾ ಪ್ರೋಕ್ತಾಃ ಶಿವೇನ ಪರಮಾತ್ಮನಾ ।
ಶೈವಂ ಪಾಶುಪತಂ ಸೋಮಂ ಲಾಕುಲಂ ಚೇತಿ ಭೇದತಃ ॥೯
ತೇಷು ಶೈವಂ ಚತುರ್ಭೇದಂ ತಂತ್ರಂ ಸರ್ವವಿನಿಶ್ಚಿತಂ ।
ವಾಮಂ ಚ ದಕ್ಷಿಣಂ ಚೈವ ಮಿಶ್ರಂ ಸಿದ್ಧಾಂತಸಂಜ್ಞಕಂ ॥೧೦
ಶಕ್ತಿಪ್ರಧಾನಂ ವಾಮಾಖ್ಯಂ ದಕ್ಷಿಣಂ ಭೈರವಾತ್ಮಕಂ ।
ಸಪ್ತಮಾತೃಪರಂ ಮಿಶ್ರಂ ಸಿದ್ಧಾಂತಂ ವೇದಸಂಮತಂ ॥೧೧
ವೇದಧರ್ಮಾಭಿಧಾಯಿತ್ವಾತ್ ಸಿದ್ಧಾಂತಾಖ್ಯಃ ಶಿವಾಗಮಃ ।
ವೇದಬಾಹ್ಯವಿರೋಧಿತ್ವಾದ್ವೇದಸಂಮತ ಉಚ್ಯತೇ ॥೧೨
ವೇದಸಿದ್ಧಾಂತಯೋರೈಕ್ಯಮೇಕಾರ್ಥಪ್ರತಿಪಾದನಾತ್ ।
ಪ್ರಾಮಾಣ್ಯಂ ಸದೃಶಂ ಜ್ಞೇಯಂ ಪಂಡಿತೈರೇತಯೋಃ ಸದಾ ॥೧೩
ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ ।
ನಿರ್ದಿಷ್ಟಮುತ್ತರೇ ಭಾಗೇ ವೀರಶೈವಮತಂ ಪರಂ ॥೧೪

---

ಶಿವಪರಮಾತ್ಮನಿಂದ ಆಗಮಗಳು ಶೈವ-ಪಾಶುಪತ-ಸೋಮ-ಲಾಕುಲ ಭೇದದಿಂದ ಅನೇಕಪ್ರಕಾರವಾಗಿ ಹೇಳಲ್ಪಟ್ಟವೆ. ॥೯॥ ಆ ಆಗಮಗಳಲ್ಲಿ ಶೈವತಂ ವಾಮ-ದಕ್ಷಿಣ-ಮಿಶ್ರ-ಸಿದ್ಧಾಂತ ಎಂಬ ಹೆಸರುಗಳಿಂದ ನಾಲ್ಕು ಭೇದಗಳುಳ್ಳದ್ದಾ ವುದೆಂದು ಸರ್ವತಂತ್ರಜ್ಞರಿಂದ ನಿಶ್ಚಯಿಸಲ್ಪಟ್ಟಿದೆ. ॥೧೦॥ ವಾಮತಂತ್ರವು ಪ್ರಧಾನವಾಗಿಯೂ, ದಕ್ಷಿಣತಂತ್ರವು ಭೈರವದೇವತಾತ್ಮಕವಾಗಿಯೂ, ಮಿಶ್ರತಂ ಸಪ್ತಮಾತೃದೇವತಾತ್ಮಕವಾಗಿಯೂ, ಸಿದ್ಧಾಂತತಂತ್ರವು ವೇದಸಂಮತವಾಗಿ ಇರುವುವು. ॥೧೧॥ ಸಿದ್ಧಾಂತನಾಮಕವಾದ ಶಿವಾಗಮವು ವೇದೋಕ್ತ ಭಸ್ಮಧಾರಣ-ರುದ್ರಾಕ್ಷಧಾರಣ-ಲಿಂಗಧಾರಣಾದಿಧರ್ಮಗಳನ್ನು ಪ್ರತಿಪಾದಿಸುತ್ತಿರು ರಿಂದಲೂ, ವೇದಬಾಹ್ಯಗಳಾದ ಚಾರ್ವಾಕಾದಿಮತಗಳನ್ನು ವಿರೋಧಿಸುತ್ತಿರು ರಿಂದಲೂ ವೇದಸಮ್ಮತವೆಂದು ಹೇಳಲ್ಪಡುವುದು. ॥೧೨॥ "ಸರ್ವವೇದ ಯದ್ದೃಷ್ಟಂ ತತ್ಸರ್ವಂ ತು ಶಿವಾಗಮೇ ॥" ಎಂಬ ವೀರಾಗಮಪ್ರಮಾಣಾನುಸಾರವ ವೇದಶಾಸ್ತ್ರ ಮತ್ತು ಸಿದ್ಧಾಂತಶಾಸ್ತ್ರ ಇವೆರಡೂ ಒಂದೇ ಅರ್ಥವನ್ನು ಪ್ರತಿಪಾ ತ್ತಿರುವುದರಿಂದ, ಪಂಡಿತರಾದವರು ಇವೆರಡಕ್ಕೂ ಒಂದೇ ವಿಧವಾದ ಪ್ರಾಮಾ ವನ್ನು ತಿಳಿಯಬೇಕು. ॥೧೩॥ ಶಿವನಿಂದ ಹೇಳಲ್ಪಟ್ಟ ಕಾಮಿಕಾದಿವಾತುಲಾಂತ ಸಿದ್ಧಾಂತನಾಮಕಮಹಾತಂತ್ರದ ಉತ್ತರಭಾಗದಲ್ಲಿ, ಪರಮಪವಿತ್ರವಾದ ವೀರ ಮತದ ಸ್ವರೂಪವು ಹೇಳಲ್ಪಟ್ಟಿರುವುದು. ॥೧೪॥

ವಿಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯಬೋಧಿಕಾ ।
ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಸ್ತು ತೇ ಮತಾಃ ॥೧೫॥
ವೇದಾಂತಜನ್ಯಂ ಯದ್‍ಜ್ಞಾನಂ ವಿದ್ಯೇತಿ ಪರಿಕೀರ್ತ್ಯತೇ ।
ವಿದ್ಯಾಯಾಂ ರಮತೇ ಯಃ ಸ ವೀರ ಇತ್ಯಭಿಧೀಯತೇ ॥೧೬॥
ವಿದ್ಯಾಯಾಂ ಶಿವರೂಪಾಯಾಂ ರಮಂತೇ ಯೇ ವಿಶೇಷತಃ ।
ತಸ್ಮಾದೇತೇ ಮಹಾಭಾಗಾ ವೀರಶೈವಾ ಇತಿ ಸ್ಮೃತಾಃ ॥೧೭॥
ವಿದ್ಯಾಯಾಂ ರಮತೇ ಯಸ್ಮಾನ್ಮಾಯಾಂ ಹೇಯಾಂ ಶ್ವವದ್ರಹೇತ್ ।
ಅನೇನೈವ ನಿರುಕ್ತೇನ ವೀರಮಾಹೇಶ್ವರಃ ಸ್ಮೃತಃ ॥೧೮॥
ಶೈವೈರ್ಮಾಹೇಶ್ವರೈಶ್ಚೈವ ಕಾರ್ಯಮಂತರ್ಬಹಿಃ ಕ್ರಮಾತ್ ।
ಶಿವೋ ಮಹೇಶ್ವರಶ್ಚೇತಿ ನಾತ್ಯಂತಮಿಹ ಭಿದ್ಯತೇ ॥
ಯಥಾ ತಥಾ ನ ಭಿದ್ಯಂತೇ ಶೈವಾ ಮಾಹೇಶ್ವರಾ ಅಪಿ ॥೧೯॥

---

"ವಿ" ಎಂಬ ಶಬ್ದವು ಲಿಂಗಾಂಗಸಾಮರಸ್ಯರೂಪಶಿವಜೀವೈಕ್ಯವಿದ್ಯೆಯನ್ನು ಬೋಧಿಸುತ್ತದೆ. ಇಂತಹ ಲಿಂಗಾಂಗಸಾಮರಸ್ಯರೂಪಶಿವಜೀವೈಕ್ಯವಿದ್ಯೆಯಲ್ಲಿ ಯಾರು ವಿನೋದದಿಂದ ಕ್ರೀಡಿಸುತ್ತಾರೆಯೋ, ಅವರು ವೀರಶೈವರೆಂದು ಹೇಳಿಸಿಕೊಳ್ಳುವರು. "ಅನ್ಯೇಷಾಮಪಿ ದೃಶ್ಯತೇ" (೬-೩-೧೩೭) ಎಂಬ ಪಾಣಿನೀಯಸೂತ್ರಾನುಸಾರವಾಗಿ, "ವಿ" ಶಬ್ದಕ್ಕೆ ದೀರ್ಘವು ಪ್ರಾಪ್ತವಾಗುವುದರಿಂದ, "ವೀರ" ಎಂಬ ಶಬ್ದವು ಸಿದ್ಧವಾಗುತ್ತದೆ. ॥೧೫॥ ಯಾವ ಜ್ಞಾನವು ವೇದಾಂತಜನ್ಯವಾದುದೋ, ಅದು ವಿದ್ಯೆಯೆಂದು ಹೇಳಿಸಿಕೊಳ್ಳುವುದು. ಇಂತಹ ವಿದ್ಯೆಯಲ್ಲಿ ಯಾವನು ರಮಿಸುವನೋ ಅವನು "ವೀರ" ಎಂದು ಹೇಳಿಸಿಕೊಳ್ಳುವನು. ॥೧೬॥ ಪರಶಿವಬ್ರಹ್ಮಸ್ವರೂಪವಾದ ವಿದ್ಯೆಯಲ್ಲಿ ವಿಶೇಷವಾಗಿ ಯಾರು ಪ್ರೀತಿಯನ್ನಿಡುವರೋ, ಅವರು ವೀರಶೈವರೆಂದು ಹೇಳಿಸಿಕೊಳ್ಳುವರು. ॥೧೭॥ ಲಿಂಗಾಂಗಸಾಮರಸ್ಯರೂಪವಾದ ಶಿವಜೀವೈಕ್ಯವಿದ್ಯೆಯಲ್ಲಿ ಪ್ರೀತಿಯುಳ್ಳವನೂ, ಹೇಯವಾದ ಮಾಯೆಯನ್ನು ನಾಯಿಯಂತೆ ನಿವಾರಿಸುವವನೂ ವೀರಮಾಹೇಶ್ವರನೆಂದು ಹೇಳಿಸಿಕೊಳ್ಳುವನು. ॥೧೮॥ ವೀರಶೈವರು ಶಿವಲಿಂಗಪೂಜೆಯನ್ನು ಅಂತರಂಗದಲ್ಲಿಯೂ, ವೀರಮಾಹೇಶ್ವರರು ಬಹಿರಂಗದಲ್ಲಿಯೂ ಮಾಡಬೇಕು. ಶಿವ ಮತ್ತು ಮಹೇಶ್ವರ ಎಂಬೀಶಬ್ದಗಳಲ್ಲಿ ಹೇಗೆ ವಿಶೇಷಭೇದವಿರುವುದಿಲ್ಲವೋ, ಹಾಗೆಯೇ ವೀರಶೈವರಲ್ಲಾಗಲಿ, ವೀರಮಾಹೇಶ್ವರರಲ್ಲಾಗಲಿ ವಿಶೇಷಭೇದವಿರುವುದಿಲ್ಲ. ॥೧೯॥

ಶಿವಾಶ್ರಿತೇಷು ತೇ ಶೈವಾ ಜ್ಞಾನಯಜ್ಞರತಾ ನರಾಃ ।
ಮಾಹೇಶ್ವರಾಃ ಸಮಾಖ್ಯಾತಾಃ ಕರ್ಮಯಜ್ಞರತಾ ಭುವಿ ॥
ತಸ್ಮಾದಭ್ಯಂತರೇ ಕುರ್ಯುಃ ಶೈವಾ ಮಾಹೇಶ್ವರಾ ಬಹಿಃ ॥
ವೀರಶೈವಾಸ್ತು ಷಡ್ಭೇದಾಃ ಸ್ಥಲಧರ್ಮವಿಭೇದತಃ ।
ಭಕ್ತಾದಿವ್ಯವಹಾರೇಣ ಪ್ರೋಚ್ಯಂತೇ ಶಾಸ್ತ್ರಪಾರಗೈಃ ॥
ಶಾಸ್ತ್ರಂ ತು ವೀರಶೈವಾನಾಂ ಷಡ್ವಿಧಂ ಸ್ಥಲಭೇದತಃ ।
ಧರ್ಮಭೇದಸಮಾಯೋಗಾದಧಿಕಾರಿವಿಭೇದತಃ ॥
ಆದೌ ಭಕ್ತಸ್ಥಲಂ ಪ್ರೋಕ್ತಂ ತತೋ ಮಾಹೇಶ್ವರಸ್ಥಲಂ ।
ಪ್ರಸಾದಿಸ್ಥಲಮನ್ಯತ್ತು ಪ್ರಾಣಲಿಂಗಿಸ್ಥಲಂ ತತಃ ॥
ಶರಣಸ್ಥಲಮಾಖ್ಯಾತಂ ಷಷ್ಠಮೈಕ್ಯಸ್ಥಲಂ ಮತಂ ॥

---

ಶಿವಾಶ್ರಿತರಲ್ಲಿ ಯಾವ ಮಾನವರು ಜ್ಞಾನಯಜ್ಞದಲ್ಲಿ ಪ್ರೀತಿಯು ಅವರು ವೀರಶೈವರೆಂದು ಹೇಳಿಸಿಕೊಳ್ಳುವರು. ಕರ್ಮಯಜ್ಞದಲ್ಲಿ ಪ್ರೀತಿ ಮಾಹೇಶ್ವರರೆಂದು ಹೇಳಿಸಿಕೊಳ್ಳುವರು. ಆದುದರಿಂದ ವೀರಶೈವರು ಯನ್ನು ಪ್ರಧಾನವಾಗಿ ಅಂತರಂಗದಲ್ಲಿಯೂ, ಮಾಹೇಶ್ವರರು ಪ್ರಧಾನವಾಗಿ ದಲ್ಲಿಯೂ ಮಾಡಬೇಕು. ॥೨೦॥ ವೀರಶೈವರು ಭಕ್ತ-ಮಾಹೇಶ್ವರ ಪ್ರಾಣಲಿಂಗಿ-ಶರಣ-ಐಕ್ಯ ಎಂಬ ಸ್ಥಲಸಂಜ್ಞಕನಾಮಧೇಯಗಳಿಂದ ಆರು ದ್ದಾರೆ. ॥೨೨॥ ವೀರಶೈವಶಾಸ್ತ್ರವು ಸ್ಥಲಭೇದದಿಂದಲೂ, ಆಯಾ ಹೇಳಲ್ಪಟ್ಟಿರುವ ಆಚಾರಭೇದದಿಂದಲೂ, ಅಧಿಕಾರಭೇದದಿಂದಲೂ ಆರು ವಾಗಿರುವುದು. ಈ ಶಾಸ್ತ್ರಕ್ಕೆ ವೀರಶೈವಧರ್ಮನಿಷ್ಠನಾದ ಮುಮುಕ್ಷುವೇ ಅಧಿ ಶಿವಜೀವೈಕ್ಯರೂಪಸಾಯುಜ್ಯಮುಕ್ತಿಯೇ ಪ್ರಯೋಜನವು; ಷಟ್ಸ್ಥಲಾಂತಗ ತ್ತರಶತಸ್ಥಲಗಳೇ ವಿಷಯವು; ಈ ವಿಷಯಕ್ಕೂ ಶಾಸ್ತ್ರಕ್ಕೂ ಪ್ರತಿಪಾದ್ಯಪ್ರ ಭಾವವೇ ಸಂಬಂಧವು; ವೀರಶೈವಶಾಸ್ತ್ರವು ಈ ಪ್ರಕಾರವಾದ ಅನುಬಂಧ ದಿಂದ ಕೂಡಿರುವುದು. ॥೨೩॥ ವೀರಶೈವಶಾಸ್ತ್ರಪ್ರಸಿದ್ಧವಾಗಿರುವ ಷಟ್ಸ ಒಂದನೆಯದು ಭಕ್ತಸ್ಥಲವು, ಎರಡನೆಯದು ಮಾಹೇಶ್ವರಸ್ಥಲವು, ಮೂ ಪ್ರಸಾದಿಸ್ಥಲವು, ನಾಲ್ಕನೆಯದು ಪ್ರಾಣಲಿಂಗಿಸ್ಥಲವು, ಐದನೆಯದು ಶರಣ ಆರನೆಯದು ಐಕ್ಯಸ್ಥಲವು; ಈ ರೀತಿಯಾಗಿ ಸ್ಥಲವು ಆರುಪ್ರಕಾರವಾಗಿರು

